# ಅಚಲ

ತಿಂಗಳ ಪತ್ರಿಕೆ

ಬಿಡಿಪ್ರತಿ : 4 ರೂ.

ನವಂಬರ್ - 2005

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,

ಬೆಂಗಳೂರು

# ಅಚಲ

ಸಂಪುಟ - 20  ಸಂಚಿಕೆ : 11

*ಸಂಪಾದಕ ಮಂಡಲಿ*

ಎಸ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾ ನಾಗರಾಜ್
ಹೆಚ್. ಎಸ್. ಗೀತಾ
ಹೇಮಲತಾ ಮಹಿಷಿ

*ಪ್ರಕಾಶಕರು*

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/- ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.
ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.
ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


## ಪ್ರೀತಿಯ ಚಂದಾದಾರರೇ,

ಅಚಲ ನಿಮ್ಮೆಲ್ಲರ ಪ್ರೋತ್ಸಾಹದಿಂದ ಬೆಳೆಯಬೇಕಿದೆ. ನಿಮ್ಮ ಚಂದಾ ಮುಗಿದ ನಂತರ ದಯವಿಟ್ಟು ನವೀಕರಿಸಿ. ನಿಮ್ಮ ಆತ್ಮೀಯರಿಗೆ, ಸ್ನೇಹಿತರಿಗೆ ಚಂದಾ ಮಾಡಿಸಿ 'ಅಚಲ'ದ ಬಳಗವನ್ನು ವಿಸ್ತರಿಸಿ.


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ✍ ಸಂಪಾದಕೀಯ ✍

# ಅಭಿವ್ಯಕ್ತಿ ಸ್ವಾತಂತ್ರ್ಯದ ಕಗ್ಗೊಲೆ

ಖುಷಬೂ ಸಂದರ್ಶನವೊಂದರಲ್ಲಿ ವಿವಾಹ ಪೂರ್ವ ಲೈಂಗಿಕತೆಯನ್ನು ಕುರಿತಂತೆ ಆಡಿದ ಮಾತುಗಳು ವಿವಾದಕ್ಕೆಡೆಯಾದ ನಂತರ ನಡೆಯುತ್ತಿರುವ ವಿದ್ಯಮಾನಗಳು ನಿಜಕ್ಕೂ ನಮ್ಮ ಸಮಾಜದ ಕೊಳಕಿಗೆ ಕನ್ನಡಿ ಹಿಡಿದಂತಿದೆ. ನಮ್ಮ 'ಸಂಸ್ಕೃತಿ'ಯನ್ನು ಕಾಯಲು ಹೊರಟ ರಣಧೀರರು ತಾವೆಂಥ ಸಂಸ್ಕೃತಿಯ ಪ್ರತಿನಿಧಿಗಳು ಎಂಬುದನ್ನು ಸಾಬೀತು ಮಾಡುತ್ತಿದ್ದಾರೆ ! ಅಭಿವ್ಯಕ್ತಿ ಸ್ವಾತಂತ್ರ್ಯದ ಕಗ್ಗೊಲೆಯು ಹೆಚ್ಚಾಗುತ್ತಿರುವ ಇತ್ತೀಚಿನ ದಿನಗಳಲ್ಲಿ ಇದೊಂದು ಸಾಂಸ್ಕೃತಿಕ ಭಯೋತ್ಪಾದನೆಯ ಲಕ್ಷಣವಾಗಿ ಕಂಡುಬರುತ್ತಿದೆ.

ಚಿತ್ರತಾರೆಯರನ್ನು ಎಲ್ಲಿಲ್ಲದಂತೆ ಮೆರೆದಾಡಿಸುವ ಈ ದೇಶದಲ್ಲಿ ಅವರು ದೇವರೂ ಹೌದು, ದೆವ್ವಗಳೂ ಹೌದು ಎಂಬಂತೆ ವರ್ತಿಸುವ ಜನರ ಸಮೂಹಸನ್ನಿ ಚಿಂತನೆಗೂ ನಿಲುಕದ್ದು. ಇದೇ 'ಖುಷಬೂ'ಗೆಂದು ದೇವಸ್ಥಾನ ನಿರ್ಮಿಸಿದ ನೆಲದ ಜನ ಅವಳ ಒಂದೇ ಒಂದು ಮಾತಿಗೆ ತಿರುಗಿ ಬೀಳುವುದರ ಅರ್ಥವೇನು ? ಚಿತ್ರತಾರೆಯೊಬ್ಬಳ ಒಂದು ವೈಯಕ್ತಿಕ ಅಭಿಪ್ರಾಯಕ್ಕೆ ಇಡೀ ಸಮಾಜದ ನೈತಿಕತೆಯನ್ನು ಹಾಳು ಮಾಡಬಲ್ಲಷ್ಟು ಶಕ್ತಿಯಿದೆಯೇ ? ಇಂದು ನಾವು ದಿನನಿತ್ಯ ನೋಡುವ ಟಿ.ವಿ. ಚಾನಲ್‌ಗಳು ಮತ್ತು ಸಿನಿಮಾಗಳಲ್ಲಿ ಕಂಡು ಬರುವ ಎಲ್ಲಾ ವಿಕೃತ ಮನುಷ್ಯ ಸಂಬಂಧಗಳು ಹಾಗೂ ಅಸಹ್ಯಕರ ದೃಶ್ಯಗಳ ಬಗ್ಗೆ ಚಕಾರವೆತ್ತದೆ ಚಿತ್ರತಾರೆಯೊಬ್ಬರ ವೈಯಕ್ತಿಕ ಅಭಿಪ್ರಾಯದ ವಿರುದ್ಧ ಬಂಡೆದ್ದ ಈ ಸಮೂಹ ಸನ್ನಿಗೆ ಯಾವುದೇ ಸಾಮಾಜಿಕ ಕಾಳಜಿಯೂ ಆಧಾರವಾಗಿಲ್ಲವೆಂಬುದು ಸೂರ್ಯಸ್ಪಷ್ಟ.

ಹೆಣ್ಣಿನ ಬಗ್ಗೆ ವಿಶಾಲ ದೃಷ್ಟಿ ತೋರಿದ 'ಆತ್ಮಗೌರವ' ಚಳುವಳಿಯ ನೇತಾರ ಪೆರಿಯಾರ್‌ರ ನಾಡಿನಲ್ಲಿ ಇಂತಹ ಕೃತ್ಯ ನಡೆಯುತ್ತಿರುವುದು ನಿಜಕ್ಕೂ ನಾಚಿಕೆಗೇಡಿನ ಸಂಗತಿ. ಖುಷಬೂನ ಬೆಂಬಲಿಸಿದ ಚಿತ್ರತಾರೆ ಸುಹಾಸಿನಿ ಮತ್ತು ಕ್ರೀಡಾತಾರೆ ಸಾನಿಯಾ ವಿರುದ್ಧವೂ ಇಂತಹುದೇ ಪ್ರತಿಭಟನೆ ವ್ಯಕ್ತವಾಗಿದ್ದು ಇದರಲ್ಲಿ ಸ್ತ್ರೀ ಪುರುಷರೆನ್ನದೆ ಎಲ್ಲರೂ ಭಾಗಿಯಾಗಿರುವುದು ನಿಜಕ್ಕೂ ದುರ್ದೈವ.

ಸಮಾಜದಲ್ಲಿ ಅಶಾಂತಿಯನ್ನು ಹರಡುವವರು ಮತ್ತು ಕೀಳು ಅಭಿರುಚಿಯನ್ನು ಹುಟ್ಟು ಹಾಕುವವರು ಯಾರೆಂಬ ಪ್ರಶ್ನೆಯ ಚರ್ಚೆ ಒತ್ತಟ್ಟಿಗಿರಲಿ, ಆದರೆ ತಮಿಳುನಾಡಿನ ರಾಜಕೀಯದ ಚದುರಂಗದಾಟದಲ್ಲಿ ಖುಷಬೂ ಬಲಿಯಾಗಿದ್ದಾರೆ, ಎನ್ನುವುದರಲ್ಲಿ ಎರಡು ಮಾತಿಲ್ಲ. ಹಿಂದೆ 'ವಿವಾಹ ಮತ್ತು ನೀತಿಸಂಹಿತೆ' ಪುಸ್ತಕವನ್ನು ಬರೆದ ಬರ್ಟ್ರಂಡ್ ರಸೆಲ್ ಕೂಡ ಅಮೆರಿಕದಲ್ಲಿ ಇಂತಹ ವಿರೋಧವನ್ನು ಎದುರಿಸಬೇಕಾಗಿ ಬಂದಿತ್ತು. ಅಲ್ಲಿಯೂ ಈ ವಿರೋಧ ಬರ್ಟ್ರೆಂಡ್ ರಸೆಲ್‌ರವರ ವಿವಾಹದ ಕುರಿತ ಚಿಂತನೆಗಾಗಿರದೆ ಅವರು 'ಯುದ್ಧನೀತಿ'ಯನ್ನು ಕುರಿತು ತಳೆದ ನಿಲುವುಗಳನ್ನು ಧಿಕ್ಕರಿಸುವ ಪ್ರಯತ್ನವಾಗಿತ್ತು. ಹಾಗೆಯೇ ಜಯ ಟಿ.ವಿ.ಯಲ್ಲಿ ಕಾರ್ಯಕ್ರಮವೊಂದರ ನಿರೂಪಕಳಾಗಿ ಕಾಣಿಸಿಕೊಳ್ಳುತ್ತಿದ್ದ ಖುಷಬೂಳ ವಿರೋಧದ ಹಿಂದೆ ಯಾವ ಯಾವ ರಾಜಕೀಯ ಹಿತಾಸಕ್ತಿಗಳು ಕೆಲಸ ಮಾಡುತ್ತಿರಬಹುದು ಎಂಬುದು ನಿಜವಾಗಿಯೂ ಎದ್ದು ಕಾಣುವ ಅಂಶ. ಇದು ಇಂದಿನ ಭವ್ಯ ಭಾರತದ ಚಿತ್ರಕ್ಕೆ ಹಿಡಿದ ಕನ್ನಡಿಯಾಗಿದೆ.

ಕಳೆದ ಒಂದು ದಶಕದಿಂದ ನಮ್ಮ ದೇಶದಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಅವಲೋಕಿಸಿದಾಗ ಹೆಚ್ಚುತ್ತಿರುವ ಮತೀಯ ಶಕ್ತಿಗಳು ಇಂತಹ ವರ್ತನೆಗಳಿಗೆ ಪ್ರೇರಕ ಅಂಶಗಳಾಗಿ ಪ್ರಭಾವ ಬೀರುತ್ತಿವೆ, ಎಂಬ ಅಂಶವೂ ಗಮನಿಸಬೇಕಾದುದೇ. ಸಾನಿಯಾ ಉಡುಪು ಹೇಗಿರಬೇಕು, ಯಾರು ಎಂತಹ ಚಿತ್ರ ಬರೆಯಬೇಕು ? ಯಾರು ಯಾರನ್ನು ಬೆಂಬಲಿಸಬೇಕು ? ಎಂತಹ ಪುಸ್ತಕಗಳನ್ನು ಬರೆಯಬೇಕು ? ಎಂತಹ ಚಿತ್ರಗಳನ್ನು ನಿರ್ಮಿಸಬೇಕು - ಇಂತಹ ಅಭಿವ್ಯಕ್ತಿಯ ಹಲವಾರು ಸಾಧ್ಯತೆಗಳ ಮೇಲೆ ಹಿಡಿತ ಸಾಧಿಸಿ, ಸಾಂಸ್ಕೃತಿಕ ಭಯೋತ್ಪಾದಕತೆಯನ್ನು ಮೆರೆಯುತ್ತಿರುವ ಎಲ್ಲ ಸಮಾಜಘಾತುಕಶಕ್ತಿಗಳ ಗೂಂಡಾಗಿರಿಯನ್ನು ಇಂದು ಪ್ರತಿಭಟಿಸಬೇಕಿದೆ ; ಅಭಿವ್ಯಕ್ತಿ ಸ್ವಾತಂತ್ರ್ಯದ ಪಾವಿತ್ರ್ಯವನ್ನು ರಕ್ಷಿಸಬೇಕಿದೆ.

- ಎನ್. ಗಾಯತ್ರಿ

# ‘ಗಂಡನ ಮನೆ’ಯಲ್ಲಿ ವಾಸದ ಹಕ್ಕು !

-ನೇಮಿಚಂದ್ರ

‘ಕೊಟ್ಟ ಹೆಣ್ಣು ಕುಲಕ್ಕೆ ಹೊರಗು’ ಎಂದು ಮದುವೆಯಾದೊಡನೆ ತವರಿನ ಬಾಗಿಲು ಮುಚ್ಚುವ ಸಂಪ್ರದಾಯ ಇಂದಿಗೂ ತಪ್ಪಿಲ್ಲ. ಇಂತಹ ಸಾಮಾಜಿಕ ಪರಿಸರದಲ್ಲಿ ವಿವಾಹ ಯಾವುದೇ ಕಾರಣಕ್ಕೆ ಅಸಹನೀಯವಾದರೆ ಹೆಣ್ಣಿಗೆ ವಿವಾಹದಾಚೆಗೆ ನಡೆದು ಹೋಗುವ ಅವಕಾಶವೇ ಇಲ್ಲ. ಬಹಳ ಮುಖ್ಯವಾಗಿ ಆಕೆ ಎಲ್ಲಿ ಹೋಗಬಲ್ಲಳು ? ‘ತನ್ನ ವಿವಾಹಿತ ಮನೆಯಲ್ಲಿ ವಾಸಿಸುವ ಹಕ್ಕು ತನ್ನದು’ ಎಂದು ಪಟ್ಟು ಹಿಡಿದು ಕೂರಲು ನಿಖರವಾದ ಕಾನೂನಿನ ನೆರವಿನ್ನೂ ವಿವಾಹಿತ ಸ್ತ್ರೀಯರಿಗೆ ಒದಗಿ ಬಂದಿಲ್ಲ.

ಗಂಡನಿಂದ ಬಡಿಸಿಕೊಂಡ ಹೆಣ್ಣಿಗೆ ಸಾಮಾನ್ಯವಾಗಿ ನೀಡುವ ಸಲಹೆ. ‘ಆ ಮನೆ ಬಿಟ್ಟು ಹೊರಗೆ ಬಾ’ ಎಂದು. ಅವಳಿನ್ನೂ ಅದೇ ಮನೆಯಲ್ಲಿ ಇದ್ದಾಳೆ ಎಂದರೆ, ಗಂಡನ ಬಡಿತ ಅವಳಿಗೆ ಒಗ್ಗಿದೆ ಎಂದು ತೀರ್ಮಾನಿಸಿಬಿಡುತ್ತಾರೆ. ಆ ಹೆಣ್ಣಿಗೆ, ಅದರಲ್ಲೂ ಗೃಹಿಣಿಯಾಗಿ ತನ್ನೆಲ್ಲ ಬದುಕನ್ನು ಗಂಡ ಮಕ್ಕಳ ಸೇವೆಯಲ್ಲಿಯೇ ಕಳೆದು ಸ್ವಂತ ದುಡಿಮೆ. ಆರ್ಥಿಕ ಸ್ವಾವಲಂಬನೆ ಇಲ್ಲದ ಮಹಿಳೆಗೆ, ಗಂಡನ ಮನೆಯನ್ನು ಬಿಟ್ಟು ಹೊರ ಬರುವುದು ಸಾಧ್ಯವಿರುವುದಿಲ್ಲ. ಇಂದಿನ ಪರಿಸ್ಥಿತಿಯಲ್ಲಿ ತಲೆಯ ಮೇಲೊಂದು ಸೂರು ದೊರೆಯುವುದು ಸುಲಭವಲ್ಲ. ಹಾಗೆಂದು ಗಂಡನಿಂದ ಬೇರ್ಪಟ್ಟರೂ ‘ಗಂಡನ ಮನೆ’ಯಲ್ಲಿ ಉಳಿಯಲು ಆಕೆ ನಿಶ್ಚಯಿಸಿದರೆ, ಅದಕ್ಕಿನ್ನೂ ಸ್ಪಷ್ಟವಾದ ಕಾನೂನಿನ ಬೆಂಬಲವಿಲ್ಲ. ಮೊದಲು ಗಂಡನ ಮನೆಯನ್ನು, (ಅದು ಅವನೊಬ್ಬನ ಹೆಸರಲ್ಲಿಯೇ ಇದ್ದರೂ) ಗಂಡ-ಹೆಂಡತಿ ಇಬ್ಬರಿಗೂ ಸೇರಿದ ಮನೆಯೆಂದು ಗುರುತಿಸಬೇಕಿದೆ. ಅದು ‘ಕುಟುಂಬದ ಮನೆ’ಯಾಗಬೇಕು. ಕಾರಣ, ಗಂಡ ಹೊರಗೆ ದುಡಿದರೆ, ಹೆಂಡತಿ ಮನೆಯ ಒಳಗೆ ದುಡಿದಿರುತ್ತಾಳೆ. ಸಂಬಳವಿಲ್ಲದ ಕಾರಣಕ್ಕೆ, ಕುಟುಂಬಕ್ಕೆ ಆಕೆ ನೀಡಿರುವ ಕೊಡುಗೆಯನ್ನು ಕಡೆಗಾಣಿಸಲಾಗದು.

ಕೌಟುಂಬಿಕ ಜಗಳದ ಪ್ರಸಂಗದಲ್ಲಿ ಸದಾ ಕಾಲ ಹೆಣ್ಣನ್ನು ಮನೆಯಿಂದ ಹೊರಗೆ ದೂಡುವುದನ್ನು ನೋಡುತ್ತೇವೆ. ಇಲ್ಲ ಕೌಟುಂಬಿಕ ಹಿಂಸೆಯನ್ನು ಸಹಿಸಲಾರದೆ ಆಕೆಯೆ ಮನೆಯಿಂದ ಹೊರಗೆ ಬೀಳಬೇಕಾದ ಪರಿಸ್ಥಿತಿಯನ್ನು ಕಾಣುತ್ತೇವೆ. ಹೆಣ್ಣಿಗೆ ಮದುವೆಯಾಗಿ ಹೋದ ಮನೆಯಲ್ಲಿ ವಾಸಿಸುವ ಹಕ್ಕು ಇದೆ ಎಂದು ಸ್ಪಷ್ಟ ಕಾನೂನು ಇಲ್ಲದಿದ್ದರೂ ಕೆಲವಾದರೂ ಆಶಾದಾಯಕ ತೀರ್ಪುಗಳು ಕಂಡು ಬಂದಿವೆ. ಇಂತಹ ಕೇಸುಗಳನ್ನು ಮಹಿಳಾ ಹಕ್ಕುಗಳ ವಕೀಲರಾದ ಫ್ಲೇವಿಯಾ ಆಗ್ನೇಸ್ ಉಲ್ಲೇಖಿಸುತ್ತಾರೆ.

1977ರ ‘ಎ ವರ್ಸಸ್ ಬಿ’ ಕೇಸಿನಲ್ಲಿ ಬಾಂಬೆ ಹೈ ಕೋರ್ಟು, ಯಾವುದೇ ಕೌಟುಂಬಿಕ ಕಲಹದ ಕೇಸಿನ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಾಗ, ಕೋರ್ಟಿಗೆ ‘ಗಂಡನನ್ನು ಮ್ಯಾಟ್ರಿಮೋನಿಯಲ್ ಮನೆಯೊಳಗೆ ಪ್ರವೇಶದಂತೆ ತಡೆಯುವ’ ಹಕ್ಕು ಇದೆ ಎಂದು ತೋರಿಸಿತು.

ಹಾಗೆಯೇ 1982ರ ‘ಅಬ್ದುಲ್ ರಹೀಮ್ ವರ್ಸಸ್ ಪದ್ಮಾ’ ಕೇಸಿನಲ್ಲಿ ‘ಗಂಡ, ಹೆಂಡತಿಗೆ ವಾಸಿಸಲು ಬೇರೊಂದು ಜಾಗವನ್ನು ನೀಡಿರದ ಕಾರಣ. ಆಕೆಗೆ ಅದೇ ಮನೆಯ ಒಂದು ಭಾಗದಲ್ಲಿ ವಾಸಿಸಲು ಅನುವು ಮಾಡಿಕೊಡಬೇಕು’ ಎಂದು ತೀರ್ಪಿತ್ತಿತು.

‘ತಲೆಯ ಮೇಲೊಂದು ಸೂರು’ ಪ್ರತಿಯೊಬ್ಬರ ಅಗತ್ಯ. ಅದರಲ್ಲೂ ಗಂಡನನ್ನು ಬಿಟ್ಟು ಅಥವಾ ಗಂಡನೇ ಇವಳನ್ನು ಬಿಟ್ಟ ಹೆಂಗಸಿಗೆ ತನ್ನ ರಕ್ಷಣೆಗೊಂದು ಮನೆ ಅತ್ಯಗತ್ಯ ಮೇಲಿನ ಎರಡು ಕೇಸುಗಳು ಗಂಡ, ಹೆಂಡತಿಯನ್ನು ಮನೆಯಿಂದ ಹೊರಗೆ ದೂಡುವ ಪ್ರಸಂಗದಲ್ಲಿ ನಮ್ಮ ಅನುಕೂಲಕ್ಕೆ ಒದಗಿ ಬರಬಲ್ಲ ಉದಾಹರಣೆಗಳಾಗಿವೆ. ಇತ್ತೀಚಿನ ದಿನಗಳಲ್ಲಿ ನ್ಯಾಯಾಲಯಗಳು ಹೆಣ್ಣಿನ ‘ವಿವಾಹಿತ ಮನೆಯಲ್ಲಿ ವಾಸಿಸುವ ಹಕ್ಕ’ನ್ನು ಮತ್ತಷ್ಟು ವಿಸ್ತರಿಸಿರುವುದನ್ನೂ ಫ್ಲೇವಿಯಾ ತಮ್ಮ ಲೇಖನವೊಂದರಲ್ಲಿ ಉಲ್ಲೇಖಿಸಿದ್ದಾರೆ. ‘ಬಿ.ಪಿ. ಅಚಲ ಆನಂದ್ ವರ್ಸಸ್ ಅಪ್ಪಿ ರೆಡ್ಡಿ’ ಕೇಸಿನಲ್ಲಿ ಫೆಬ್ರವರಿ 2005ರಂದು ಸುಪ್ರೀಂ ಕೋರ್ಟ್, ‘ಗಂಡ ಬಿಟ್ಟು ಹೋದ ಹೆಣ್ಣಿಗೆ ಬಾಡಿಗೆ ಸೂರನ್ನು ಕಿತ್ತುಕೊಳ್ಳುವಂತಿಲ್ಲ’ ಎಂದು ತೀರ್ಮಾನ ನೀಡಿತು. ಇಂದು ಇಂತಹ ಕೆಲವು ಕೇಸುಗಳಲ್ಲಿ ನ್ಯಾಯಾಲಯಗಳು ನೀಡಿರುವ ತೀರ್ಪುಗಳು ವಿವಾಹಿತ ಮನೆಯಲ್ಲಿ ವಾಸಿಸುವ ಮಹಿಳೆಯ ಹಕ್ಕನ್ನು ಒಂದಿಷ್ಟು ಸ್ಥಾಪಿಸಿವೆ. ವಿವಾಹದ ನಂತರ ಆಸ್ತಿಯನ್ನು ಕೌಟುಂಬಿಕ ಆಸ್ತಿ ಎಂದು ಪರಿಗಣಿಸಿ. ಅದರಲ್ಲಿ ಹೆಂಡತಿಗೂ ಗಂಡನಷ್ಟೇ ಹಕ್ಕಿರಬೇಕು ಎಂಬ ವಿಚಾರಕ್ಕೆ ಈ ಎಲ್ಲ ಸಕಾರಾತ್ಮಕ ತೀರ್ಪುಗಳು ಒಂದು ರೀತಿಯ ಪುಷ್ಟಿ ನೀಡಿವೆ. ಆದರೆ ಸದ್ಯಕ್ಕೆ ಇವು ಕೆಲವೇ ಕೆಲವು ಉದಾಹರಣೆಗಳಾಗಿವೆ. ಇಂದಿಗೂ, ಕೌಟುಂಬಿಕ ಹಿಂಸೆಯ ವಿಷಯ ಬಂದೊಡನೆ ಹೆಣ್ಣಿಗೆ ನೀಡುವ ಮೊದಲ ಸಲಹೆ ಗಂಡನ ಮನೆಯನ್ನು ಬಿಟ್ಟು ಹೊರಬರಲು ಹೇಳುತ್ತಾರೆ. ಆಕೆ ಗಂಡನ ಮನೆಯಲ್ಲಿ ಇದ್ದುಕೊಂಡೇ ಕೌಟುಂಬಿಕ ಹಿಂಸೆಯ ವಿರುದ್ಧ ಹೋರಾಡಲು ಹೊರಟಾಗ ಆಕೆಯ ಕೇಸು ಅಷ್ಟು ಶಕ್ತವಾಗುವುದಿಲ್ಲ. ನ್ಯಾಯವಾದಿಗಳಿಗೆ ಗಂಡನಿಂದ ಬಡಿಸಿಕೊಂಡೂ ಗಂಡನ ಮನೆಯಲ್ಲಿ ವಾಸಿಸುವ ಹಕ್ಕನ್ನು ಬೇಡುವುದು ವಿಪರ್ಯಾಸವಾಗಿ ಕಾಣುತ್ತದೆ. ಆದರೆ ಇದರಲ್ಲಿ ವಿಪರ್ಯಾಸವಿಲ್ಲ. ಇಂದು, ಒಂದು ಮನೆಯನ್ನು ಬಾಡಿಗೆಗೆ ಪಡೆಯುವುದು ಕೂಡಾ ಸುಲಭವಲ್ಲ. ಹೆಣ್ಣು ಗಂಡನ ಬಡಿತದ ವಿರುದ್ಧ ಹೋರಾಡುವುದು, ಜೊತೆಯಲ್ಲಿಯೇ ತನ್ನ ವಾಸದ ಹಕ್ಕಿನ ಬಗ್ಗೆ ಹೋರಾಡುವುದು - ಎರಡೂ ಆಕೆಯ ಬದುಕುಳಿಯುವ ಪ್ರಯತ್ನದ್ದು. ಇವು ಪರಸ್ಪರ ವಿರುದ್ಧವಾಗಿ ಕಾಣಬೇಕಿಲ್ಲ. ವಿವಾಹ ಹೆಣ್ಣಿಗೆ ರಕ್ಷಣೆಯನ್ನು ನೀಡಬೇಕು. ಇಂದು ಕೌಟುಂಬಿಕ ಹಿಂಸೆಯನ್ನು ಕುರಿತ ಬಿಲ್ ಕಾನೂನಾಗಿ ಬಹಳಷ್ಟು ಬೇಗನೆ ಹೊರ ಬರುವ ಸೂಚನೆಗಳಿವೆ. ಅದರೊಡನೆ ಹೆಣ್ಣಿಗೆ ವಿವಾಹಿತ ಮನೆಯಲ್ಲಿ ವಾಸಿಸುವ ಸ್ಪಷ್ಟ ಹಕ್ಕೂ ದೊರೆಯುವಂತಾಗಬೇಕು.

# ಅಮೃತ ಇನ್ನಿಲ್ಲ



1982ರಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ಪಂಜಾಬಿ ಭಾಷೆಯ ಶ್ರೇಷ್ಠ ಲೇಖಕಿ ಹಾಗೂ ಕವಿ, ಅಮೃತಾ ಪ್ರೀತಂ ಇನ್ನಿಲ್ಲ. ಮೂರು ವರ್ಷಗಳ ಹಿಂದೆ ಶೌಚಗೃಹದಲ್ಲಿ ಬಿದ್ದು ಪೆಲ್ವಿಕ್ ಮೂಳೆ ಮುರಿದುಕೊಂಡ ಅಮೃತಾ ಹಾಸಿಗೆ ಹಿಡಿದಿದ್ದರು. 86 ವರ್ಷದ ಅಮೃತಾ, ಅಕ್ಟೋಬರ್ 31ರಂದು ದಿಲ್ಲಿಯ ತಮ್ಮ ಹಾಸಕಾಸ್ ಮನೆಯಲ್ಲಿ ನಿದ್ರೆಯಲ್ಲಿಯೇ ನಿಧನರಾದರು.

ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಮೊದಲ ಮಹಿಳೆ ಹಾಗೂ ಪದ್ಮಶ್ರೀ ಪುರಸ್ಕಾರವನ್ನು ಪಡೆದ ಪ್ರಥಮ ಮಹಿಳೆ ಅಮೃತಾ ಪ್ರೀತಂ. ಅಮೃತಾ 24 ಕಾದಂಬರಿಗಳನ್ನು, 15 ಕಥಾಸಂಕಲನಗಳನ್ನು ಹಾಗೂ 73 ಕವನ ಸಂಕಲನಗಳನ್ನು ಪ್ರಕಟಿಸಿದ್ದರು.

ಅಮೃತಾ ಪ್ರೀತಂ, ಆಗಸ್ಟ್ 31, 1919ರಂದು, ಪಾಕಿಸ್ತಾನದ ಗುಜ್ರನ್‌ವಾಲಾದಲ್ಲಿ ಸಿಖ್ ಕುಟುಂಬದಲ್ಲಿ ಜನಿಸಿದರು. ದೇಶದ ವಿಭಜನೆಯಾದಾಗ, ಭಾರತಕ್ಕೆ ಬಂದ ಈಕೆಯ ಅನೇಕ ಕತೆಗಳಲ್ಲಿ ವಿಭಜನೆಯ ನೋವು ಗಾಢವಾಗಿದೆ. ದೇಶ ವಿಭಜನೆಯ ಸಮಯದಲ್ಲಿ ಈಕೆ ಕಂಡ ಹಿಂಸೆ ನೋವು, ಸದಾಕಾಲಕ್ಕೂ ಅಮೃತಾರ ಮನಸ್ಸಿನಲ್ಲಿ ಅಳಿಸದೆ ಉಳಿದು ಬಿಟ್ಟಿತು, ಆಕೆಯ ಅನೇಕ ಬರಹಗಳ ಮೂಲದ್ರವ್ಯವಾಯಿತು.

ಅಮೃತಾ ಅವರ ತಂದೆ ಶಾಲಾ ಪ್ರಾಧ್ಯಾಪಕರಷ್ಟೆ ಅಲ್ಲ, ಕವಿಯೂ ಆಗಿದ್ದರು. ಬರಹದ ಗೀಳು ತಂದೆಯಿಂದ ಬಂದ ಬಳುವಳಿ. ಹನ್ನೊಂದನೇ ವಯಸ್ಸಿಗೇ ತಾಯಿಯನ್ನು ಕಳೆದುಕೊಂಡ ಅಮೃತಾ, ಹದಿನಾರನೆ ವಯಸ್ಸಿಗೇ ಪ್ರೀತಂಸಿಂಗ್ ಎಂಬ ಸಂಪಾದಕರನ್ನು ವಿವಾಹವಾಗಿದ್ದರು. ಆದರೆ ಅವರ ವಿವಾಹ ಮುರಿದು ಬಿತ್ತು. ಇದೇ ಸಮಯದಲ್ಲಿ ಆಕೆಯ ಬರಹಗಳಲ್ಲಿ ಸ್ತ್ರೀವಾದಿ ವಿಚಾರ, ಮಹಿಳಾ ಸಂವೇದನೆ ಹೆಚ್ಚು ಹೆಚ್ಚು ಕಾಣ ತೊಡಗಿತ್ತು. ನಂತರದ ದಿನಗಳಲ್ಲಿ ಇಮ್ರೋಜ್ ಅವರ ಸ್ನೇಹ, ಆತ್ಮೀಯತೆ ಅಮೃತಾರ ಕಡೆಯ ದಶಕಗಳನ್ನು ಪ್ರೀತಿಯಿಂದ ತುಂಬಿತ್ತು. ಭಾರತಕ್ಕೆ ಬಂದ ಮೇಲೆ ದಿಲ್ಲಿಯಲ್ಲಿ ವಾಸವಾದ ಅಮೃತಾ ಹಿಂದಿಯಲ್ಲಿಯೂ ಬರೆಯಲು ಆರಂಭಿಸಿದ್ದರು. 1961ರವರೆಗೆ ಆಕಾಶವಾಣಿಯಲ್ಲಿ ಕೆಲಸ ಮಾಡಿದರು.

ತಮ್ಮ ಜೀವನ ಕತೆಯನ್ನು ಅಮೃತಾ 1968ರಲ್ಲಿ 'ಕಪ್ಪು ಗುಲಾಬಿ' ಎಂಬ ಹೆಸರಲ್ಲಿ ಪ್ರಕಟಿಸಿದರು. ನಂತರ ಇಂಗ್ಲಿಷ್ ಭಾಷೆಗೆ ಅನುವಾದಗೊಂಡ ಆತ್ಮಕಥೆ 'ರೆವೆನ್ಯೂ ಸ್ಟಾಂಪ್' ಎಂಬ ಹೆಸರಿನಲ್ಲಿ ಪ್ರಕಟವಾಯಿತು. ಈ ಶೀರ್ಷಿಕೆಯ ಹಿಂದೆ ಸ್ವಾರಸ್ಯಕರ ಘಟನೆಯಿದೆ. ಒಮ್ಮೆ ಪ್ರಸಿದ್ಧ ಲೇಖಕ ಖುಷವಂತಸಿಂಗ್ ಎದುರು ಅಮೃತಾ ತಮ್ಮ ಆತ್ಮಕಥೆ ಬರೆಯುವ ಯೋಜನೆಯನ್ನು ಹಂಚಿಕೊಂಡರಂತೆ. ಖುಶವಂತ್‌ಸಿಂಗ್ ಅವರು ತಮಾಷೆಯಾಗಿ 'ನಿನ್ನ ಜೀವನದಲ್ಲಿ ಆತ್ಮಕಥೆ ಬರೆಯುವಂತಹುದು ಏನಿದೆ? ಇರುವಷ್ಟನ್ನು ರಸೀದಿ ತಿಕೀಟಿನ ಹಿಂಬದಿಯಲ್ಲಿ ಬರೆಯಬಹುದು' ಎಂದರಂತೆ. ಹಾಗೆಂದೇ ಅವರ ಆತ್ಮಕಥೆ ಖುಷವಂತರ ಸವಾಲಿಗೆ ನೀಡಿದ ಜವಾಬಿನಂತೆ 'ರಸೀದು ತಿಕೀಟು' ಹೆಸರಿನಲ್ಲಿಯೇ ಹೊರಬಂದಿತು. ಈಗ, ಲೋಹಿಯಾ ಪ್ರಕಾಶನದವರು ಅಮೃತಾರವರ ಆತ್ಮಕಥೆಯನ್ನು ಕನ್ನಡದಲ್ಲಿ ಪ್ರಕಟಿಸಿದ್ದಾರೆ.

ಅಮೃತ ಸ್ವತಂತ್ರ ರೀತಿಯಲ್ಲಿ ಬದುಕು ನಡೆಸಿದವರು. ಹಿಂದಿ ಕವಿ ಸಾಹಿರ್ ಲುದಿಯಾನ್ವಿಯವರನ್ನು ಕುರಿತ ಅವ್ಯಕ್ತ ಪ್ರೀತಿ, ವಿವಾಹದಾಚೆಗೂ ಪ್ರೀತಿಯ ಸಾಂಗತ್ಯ ಸಾಧ್ಯ ಎನ್ನುವಂತಿದ್ದ ಇಮ್ರೋಜ್ ಅವರೊಡನೆಯ ಬದುಕು, ಧೂಮಪಾನ, ಮದ್ಯಪಾನ - ಇವೆಲ್ಲವೂ ಆಕೆಯತ್ತ ಅನೇಕ ಪುರುಷ ಲೇಖಕರು ಕೆಂಡ ಕಾರುವಂತೆ ಮಾಡಿತ್ತು. ಆದರೆ

ಅಮೃತಾ ಸಮಾಜದ ಟೀಕೆ ಟಿಪ್ಪಣಿಗಳಿಗೆ ನೊಂದರೂ, ಹೆದರದೆ ಬದುಕು ನಡೆಸಿದವರು. 'ನನ್ನ ಬಗ್ಗೆ ವಿದೇಶಕ್ಕೆ ಭಾರತೀಯ ಲೇಖಕರ ನಿಯೋಗವೊಂದು ಸರಕಾರದ ವತಿಯಿಂದ ಹೋಗುವ ಸಂದರ್ಭ ಬಂದಿತ್ತು. ಅದರಲ್ಲಿ ಅಮೃತಾರನ್ನು ಸೇರಿಸುವ ಮಾತು ಬಂದಾಗ ಪಂಜಾಬಿ ಲೇಖಕರು ಆಕ್ಷೇಪ ತೆಗೆಯುತ್ತಾರೆ 'ಅಮೃತಾ ನಿಯೋಗದಲ್ಲಿದ್ದರೆ ನಮ್ಮ ಪತ್ನಿಯರು ನಿಯೋಗದ ಜೊತೆ ಹೋಗಲು ಬಿಡುವುದಿಲ್ಲ' - ಈ ಮಾತು ಅಮೃತಾರವರ ವೈಯಕ್ತಿಕ ಬದುಕನ್ನು ಟೀಕಿಸಿದ್ದಾಗಿತ್ತು. ಜ್ಞಾನಪೀಠ ಪ್ರಶಸ್ತಿ ಸಮಿತಿಗೆ ಸದಸ್ಯನಾಗಿ ನೇಮಕವಾದ ಒಬ್ಬ ಲೇಖಕ, 'ಈಕೆಗೆ ಇನ್ನೂ ಮೂರು ವರ್ಷ ಪ್ರಶಸ್ತಿ ಸಿಗದಂತೆ ನೋಡಿಕೊಳ್ಳುತ್ತೇನೆ' ಎಂದು ಕೂಗಾಡಿದ್ದ. ಬಹುಶಃ ಪುರುಷ ಬರಹಗಾರರ ಬದುಕಿನಲ್ಲಿ ಹಾದು ಹೋಗುವ ಪ್ರೀತಿ, ಪ್ರೇಮ, ವಿವಾಹೇತರ ಸಂಬಂಧಗಳು ಹೆಚ್ಚೇನೂ ಸುದ್ದಿಯಾಗದೆ, ಅತಿ ಸಹಜವಾಗಿ ಸಮಾಜದಲ್ಲಿ ಸ್ವೀಕರಿಸಲ್ಪಡುವುದನ್ನು, ಕೆಲವೊಮ್ಮೆ ವೈಭವೀಕೃತಗೊಳ್ಳುವುದನ್ನು ನೋಡುತ್ತೇವೆ. ಇವು ಯಾವುವೂ ಅವರ ಹಿರಿಮೆ ಗರಿಮೆಗೆ, ಸಾಮಾಜಿಕ ಬದುಕು, ಪ್ರಶಸ್ತಿ ಸನ್ಮಾನಗಳಿಗೆ ತಡೆಯಾಗದೆ ಇರುವುದನ್ನೂ ಕಾಣುತ್ತೇವೆ. ಆದರೆ ತಮ್ಮ ಹೃದಯದ ಹಾದಿಯನ್ನು ಹಿಡಿದು ಹೋದ ಮಹಿಳೆಯರು ಇಂತೆಲ್ಲ ಕಟು ಟೀಕೆಯಿಂದ ನೋಯುವ ಅನೇಕ ಸಂದರ್ಭಗಳು ಬರುತ್ತವೆ.

ಅಮೃತಾ ಅವರ ಆತ್ಮಕಥೆಯನ್ನು ಕುರಿತು ರಹಮತ್ ತರೀಕೆರೆ ಅವರು ಹೇಳುತ್ತಾರೆ 'ಒಂದರ್ಥದಲ್ಲಿ ಇದು ಅಮೃತಾರ ಅತ್ಯಂತ ಸ್ವಕೇಂದ್ರಿತ ಆತ್ಮಕಥೆ. ಪಂಜಾಬಿ ಸಮಾಜ ಬಿಂತವಾಗುವಂತೆ ಅದು ವಿಸ್ತರಿಸಿಕೊಳ್ಳುವುದಿಲ್ಲ. ಆದರೆ ನಮ್ಮ ಸಮಾಜದಲ್ಲಿ ಯಾವುದೇ ಒಬ್ಬ ಹೆಣ್ಣಿನ ಆತ್ಮಕಥೆಯು ಸಮಾಜದಲ್ಲಿ ಯಾವುದೇ ಒಬ್ಬ ಹೆಣ್ಣಿನ ಆತ್ಮಕಥೆಯು ಅವಳ ವೈಯಕ್ತಿಕವಾಗಿರುವುದಿಲ್ಲ. ಅದು ಹೇಗೋ ಮಹಿಳಾ ಸಮುದಾಯದ ಕಥನವೂ ಆಗಿರುತ್ತದೆ. ಜೊತೆಗೆ ಅದು ಪರೋಕ್ಷವಾಗಿ ನಮ್ಮ ಸಮಾಜದ ಸ್ವರೂಪಕ್ಕೆ ಹಿಡಿದ ಕನ್ನಡಿಯೂ ಆಗಿರುತ್ತದೆ'. ನಮ್ಮ ಸಮಾಜಕ್ಕೆ ಹಿಡಿದ ಕನ್ನಡಿಯಾದ, ಬದುಕಿನ ಒಡಲಿಂದ ಅರಳಿದ ಕಲಾತ್ಮಕ ಹಾಗೂ ಕಾವ್ಯಾತ್ಮಕ ಕೃತಿಗಳು ಈ ಲೇಖಕಿಗೆ ಬಹಳಷ್ಟು ಜನಪ್ರಿಯತೆಯನ್ನು ನಂತರದ ದಿನಗಳಲ್ಲಿ ತಂದುಕೊಟ್ಟವು. ಕೀರ್ತಿ ಪ್ರಶಸ್ತಿಗಳಾಗಲಿ, ಓದುಗರ ಪ್ರೀತಿಯಾಗಲಿ ಅವರಿಂದ ಬಹುಕಾಲ ದೂರ ಉಳಿಯಲಿಲ್ಲ.

ಈ ಮಹಾನ್ ಲೇಖಕಿಗೆ ಅಚಲ ತನ್ನ ಅಕ್ಷರ ನಮನವನ್ನು ಸಲ್ಲಿಸುತ್ತದೆ.



## ಅಕ್ಷರ

ಒಂದಿತ್ತು ಕಲ್ಲಿನ ನಗರ
ಸೂರ್ಯವಂಶದ ಕಲ್ಲುಗಳು
ಚಂದ್ರವಂಶದ ಕಲ್ಲುಗಳು
ವಾಸವಾಗಿದ್ದವು ಆ ನಗರದಲ್ಲಿ
ಅಲ್ಲೊಂದು ಶಿಲೆ, ಒಂದು ಕಲ್ಲು
ಇತ್ತೆಂದು ಹೇಳಲಾಗುತ್ತಿದೆ
ಆ ನಗರದಲ್ಲಿ ಅವು ಒಂದಾಗಲಿವೆ
ಎಂಬುದು ಅವುಗಳ ಬರಹವಾಗಿತ್ತು
ಅವೆರಡೂ ಸೇರಿ ನಿಷೇಧಿತ ಫಲವೊಂದನ್ನು ತಿಂದವು
ಅವು ಚಕಮಕಿ ಕಲ್ಲುಗಳಿರಬಹುದು
ಕಲ್ಲಿನ ಹಾಸಿಗೆ ಮೇಲೆ ಮಲಗಿದ್ದವು
ಕಲ್ಲುಗಳ ತಿಕ್ಕಾಟದಿಂದ
ಬೆಂಕಿಯಂತೆ ಬೆಂಕಿಯ ಋತುವಿನಲ್ಲಿ
ನಾನು ಹುಟ್ಟಿದೆ
ಮುಂದೆ ಸುಳಿವ ಗಾಳಿ ನನ್ನನ್ನು ಒಯ್ದಲ್ಲೆಲ್ಲ
ಉದುರುತ್ತಿತ್ತು ನನ್ನ ದೇಹದಿಂದ ಸುಡುವ ಬೂದಿ
ಮತ್ತದೇ ಗಾಳಿ ಎಲ್ಲಿಂದಲೊ ಧಾವಿಸಿ ಬಂತು
ಕೈಯಲ್ಲಿ ಕೆಲ ಅಕ್ಷರಗಳನ್ನು ತಂದಿತು
"ಇವುಗಳನ್ನು ಕಪ್ಪು ಗೆರೆಗಳೆನ್ನದಿರು
ಈ ಗೆರೆಗಳ ಸಮೂಹ ನಿನ್ನ ಬೆಂಕಿಯಷ್ಟೇ ಸಮರ್ಥ,"
ಎನ್ನುತ್ತಾ ಮುಂದೆ ಸಾಗಿತು.
"ನಿನ್ನ ಬೆಂಕಿಯ ಆಯುಷ್ಯ ನಿನ್ನ ಅಕ್ಷರಗಳಿಗೆ ದಕ್ಕಲಿ,"
ಎಂದು ಹಾರೈಸಿ ಮುಂದೆ ಸಾಗಿತು.

-ಅಮೃತ ಪ್ರೀತಂ

*(ಹಸನ್ ನಯೀಂ ಸುರಕೋಡ ಅವರು ಅನುವಾದಿಸಿರುವ 'ರಸೀದಿ ತಿಕೀಟು' ಪುಸ್ತಕದಿಂದ)*

# ಪುನರುಜ್ಜೀವನದ ದಿನ

- ಅಮೃತ ಪ್ರೀತಂ

ಇದೇನು ಪ್ರಳಯದ ದಿನವೆ ?

ಕಾಲದ ಗರ್ಭದಿಂದ ಜನಿಸಿ ಕಾಲದ ಗೋರಿಯನ್ನು ಸೇರಿದ ಬದುಕಿನ ಆ ಹಲವಾರು ಕ್ಷಣಗಳು ಇಂದು ನನ್ನೆದುರು ನಿಂತಿವೆ......

ಇವೆಲ್ಲ ಗೋರಿಗಳು ಹೇಗೆ ತೆರೆದುಕೊಂಡವು ? ಈ ಎಲ್ಲ ಕ್ಷಣಗಳು ಜೀವಂತ ಗೋರಿಗಳಿಂದ ಹೇಗೆ ಹೊರಬಂದವು ?

ಇದು ನಿಜಕ್ಕೂ ಪ್ರಳಯದ ದಿನ......

ಇದು 1918ರ ಗೋರಿಯಿಂದ ಹೊರ ಬಂದ ಕ್ಷಣ-ನನ್ನ ಅಸ್ತಿತ್ವಕ್ಕಿಂತಲೂ ಒಂದು ವರ್ಷ ಮೊದಲಿನದು. ಇಂದು ಮೊದಲ ಸಲ ನೋಡುತ್ತಿದ್ದೇನೆ, ಮೊದಲ ಬಾರಿ ಕೇಳಿದ್ದೆ.

ನನ್ನ ತಾಯಿ ತಂದೆಯರಿಬ್ಬರೂ ಪಂಚಖಂಡ ಭಸೋಡದ ಶಾಲೆಯಲ್ಲಿ ಪಾಠ ಮಾಡುತ್ತಿದ್ದರು. ಅವರ ವಿದ್ಯಾರ್ಥಿಗಳಲ್ಲಿ ಅಲ್ಲಿಯ ಮುಖ್ಯಸ್ಥ ಬಾಬು ತೇಜಾಸಿಂಹಜಿ ಅವರ ಮಕ್ಕಳೂ ಸೇರಿದ್ದರು. ಆ ಹೆಣ್ಣು ಮಕ್ಕಳಿಗೆ ಒಂದು ದಿನ ಅದೇನು ತಿಳಿಯಿತೋ, ಇಬ್ಬರೂ ಸೇರಿ ಗುರುದ್ವಾರಾದಲ್ಲಿ ಕೀರ್ತನ ಮಾಡಿದರು, ಪ್ರಾರ್ಥನೆ ಮಾಡಿದರು. ಪ್ರಾರ್ಥನೆಯ ಕೊನೆಯಲ್ಲಿ ಅವರು, ''ಎರಡು ಲೋಕಗಳ ಒಡೆಯನೆ, ನಮ್ಮ ಮೇಸ್ಟ್ರಿಗೂ ಒಂದು ಹೆಣ್ಣು ಮಗುವನ್ನು ದಯಪಾಲಿಸು,'' ಎಂದರು.

ತುಂಬಿದ ಸಭೆಯಲ್ಲಿ ತಂದೆಯವರು ಪ್ರಾರ್ಥನೆಯ ಈ ಶಬ್ದಗಳನ್ನು ಕೇಳಿದಾಗ ಅವರಿಗೆ ನನ್ನ ಭಾವೀ ತಾಯಿ ಮೇಲೆ ಸಿಟ್ಟು ಬಂತು. ಆಕೆಯ ಒಪ್ಪಿಗೆ ಮೇರೆಗೆ ಆ ಹೆಣ್ಣು ಮಕ್ಕಳು ಹೀಗೆ ಪ್ರಾರ್ಥನೆ ಮಾಡಿದರೆಂದು ಅವರು ಭಾವಿಸಿದರು. ಆದರೆ ತಾಯಿಗೆ ಏನೂ ಗೊತ್ತಿರಲಿಲ್ಲ. ಒಂದು ವೇಳೆ ರಾಜಬೀಬಿ ಅವರನ್ನು ಕೇಳಿದ್ದರೆ ಅವರು ಪ್ರಾಯಃ ಗಂಡು ಮಗನನ್ನು ಬಯಸುತ್ತಿದ್ದರೇನೋ ಎಂದು ಆ ಮಕ್ಕಳೇ ಅನಂತರ ಹೇಳಿದವು. ಅವರು ತಮ್ಮ ಮೇಸ್ಟ್ರಿಗೆ ಹೆಣ್ಣು ಮಗುವಾಗಲೆಂದು ಹಾರೈಸಿದರು; ತಮ್ಮಂಥವಳೇ ಆದ ಹೆಣ್ಣು ಮಗು.

ಆ ಕ್ಷಣ ಇನ್ನೂ ತನಕ ಹಾಗೆಯೇ ಮೌನವಾಗಿದೆ. ಅದೃಷ್ಟದ ರಹಸ್ಯವನ್ನು ತನ್ನ ತುಟಿಯೊಳಗೇ ಇಟ್ಟುಕೊಂಡು ಮೆಲ್ಲಗೆ ಮುಗುಳ್ನಗುತ್ತಿದೆ. ಆದರೆ ಏನನ್ನೂ ಆಡಿ ತೋರಿಸುತ್ತಿಲ್ಲ. ಆ ಹೆಣ್ಣು ಮಕ್ಕಳು ಹೀಗೇಕೆ ಪ್ರಾರ್ಥಿಸಿದರು ? ಅವರ ಯಾವ ನಂಬಿಕೆ ಫಲಿಸಿತೊ ? ನನಗೇನೂ ತಿಳಿಯದು. ವರ್ಷದೊಳಗೆ ರಾಜಬೀಬಿ ತಾಯಿಯಾದಳೆನ್ನುವುದು ನಿಜ.

ಅದಕ್ಕೂ ಹತ್ತು ವರ್ಷ ಮೊದಲು.........

ಕಾಲದ ಗೋರಿಯಲ್ಲಿ ಮಲಗಿದ್ದ ಆ ಕ್ಷಣ ಜಾಗೃತಗೊಂಡಿತು. ಇಪ್ಪತ್ತರ ಪ್ರಾಯದ ರಾಜಬೀಬಿ ಆಗ ಗುಜರಾಂವಾಲಾದಲ್ಲಿನ ಸಾಧುಗಳ ಆಶ್ರಮದಲ್ಲಿ ನೆಲಕ್ಕೆ ಹಣೆಯೂರಿದ್ದಳು. ಆಕೆಯ ದೃಷ್ಟಿ ಸುಮಾರು ಅಷ್ಟೇ ಪ್ರಾಯದ ನಂದ್ ಎಂಬ ಹೆಸರಿನ ಸಾಧುವಿನ ಮೇಲೆ ಬಿತ್ತು.

ಸಾಧು ನಂದ್ ಶ್ರೀಮಂತರ ಮಗನಾಗಿದ್ದ. ಆರು ವರ್ಷದವನಾಗಿದ್ದಾಗ ಅವನ ತಾಯಿ ಲಕ್ಷ್ಮೀ ತೀರಿ ಹೋದರು. ಅವನ ಅಜ್ಜ (ತಾಯಿಯ ತಾಯಿ) ಅವನನ್ನು ತನ್ನ ಮಡಿಲಲ್ಲಿ ಹಾಕಿಕೊಂಡಳು. ಧವಸ ಧಾನ್ಯ ಕೇರುತ್ತಿದ್ದ ಒಬ್ಬ ಹೆಣ್ಣುಮಗಳ ಎದೆ ಹಾಲಿನಿಂದ ಬೆಳೆಸಿದಳು. ನಂದ್‌ನಿಗೆ ನಾಲ್ಕು ಜನ ಅಣ್ಣಂದಿರು ಹಾಗೂ ಒಬ್ಬ ಸೋದರಿ ಇದ್ದಳು. ಆದರೆ ಅಣ್ಣಂದಿರ ಪೈಕಿ ಇಬ್ಬರು ಸತ್ತು ಹೋದರು, ಒಬ್ಬ ಅಣ್ಣ ಗೋಪಾಲಸಿಂಗ್ ಮನೆ ಮಾರು ತೊರೆದು ಕುಡುಕನಾಗಿ ಬಿಟ್ಟ ಇನ್ನೊಬ್ಬ ಹಾಕಿಮಸಿಂಗ್ ಸಾಧುಗಳ ಆಶ್ರಮ ಸೇರಿ ಬಿಟ್ಟ ನಂದ್‌ನ ಪ್ರೀತಿಯೆಲ್ಲ ಸೋದರಿ 'ಹಾಕೊ'ಗೆ ಮೀಸಲಾಯಿತು.

ಸೋದರಿ ದೊಡ್ಡವಳು. ಸುರಸುಂದರಿ. ಮದುವೆಯಾದ ಮೇಲೆ ತನ್ನ ಗಂಡ ಬೇಲಾಸಿಂಗ್‌ನನ್ನು ನೋಡಿ, ಇವನಿಗೂ ತನಗೂ ಏನೂ ಸಂಬಂಧವಿಲ್ಲವೆಂದು ಹಠ ಹಿಡಿದಳು. ಪತಿಯೊಂದಿಗೆ ಗಂಡನ ಮನೆಗೆ ಹೋಗುವ ಬದಲು ಆಕೆ ತನ್ನ ತವರು ಮನೆಯಲ್ಲೇ ನೆಲಮನೆಯನ್ನು ಕಟ್ಟಿಸಿ ಏಕಾಂತದಲ್ಲಿ ದೇವರ ನಾಮ ಸ್ಮರಣೆಗೆ ತೊಡಗಿದಳು. ಕಾವಿ ಶಾಲನ್ನು ಹೊದ್ದಳು. ರಾತ್ರಿ ಕಡಲೆಯನ್ನು ನೀರಲ್ಲಿ ನೆನೆಯಿಟ್ಟು ಹಗಲಿನಲ್ಲಿ ತಿನ್ನತೊಡಗಿದಳು. ನಂದ್ ಕೂಡ ಸೋದರಿ ಜೊತೆ ಪೈಪೋಟಿಗಿಳಿದು ಕಾವಿ ಬಟ್ಟೆ ಧರಿಸಿದ. ಆದರೆ ಸೋದರಿ ಬಹಳ ದಿನ ಬದುಕಿ ಉಳಿಯಲಿಲ್ಲ. ಆಕೆಯ ಸಾವಿನಿಂದ ಈಗ ತನಗೆ ಸಂಸಾರದಿಂದ ನಿಜವಾದ ವೈರಾಗ್ಯ ಬಂತೆಂದು ನಂದ್ ಭಾವಿಸಿದ. ತನ್ನ ಶ್ರೀಮಂತ ಅಜ್ಜ (ತಾಯಿಯ ತಂದೆ)

ಸರದಾರ್ ಅಮರಸಿಂಗ್‌ನಿಂದ ದೊರೆತ ಅಪಾರ ಆಸ್ತಿಯನ್ನು ತೊರೆದು ಸಂತ್ ದಯಾಲಜಿ ಆಶ್ರಮ ಸೇರಿದ. ಸಂಸ್ಕೃತ ಕಲಿತ, ಬ್ರಜ್ ಭಾಷೆ ಕಲಿತ. ರೋಗ ಚಿಕಿತ್ಸೆ ಕಲಿತ. ಆಶ್ರಮದಲ್ಲಿ 'ಬಾಲಕಾ ಸಾಧು' ಎಂದು ಕರೆಯಿಸಿಕೊಂಡನು. ಸೋದರಿ ಬದುಕಿದ್ದಾಗ ಮಾಮಾ ಮಾಮಿಯರು ನಂದ್‌ನಿಗೆ ಅಮೃತಸರ್‌ದ ವಧುವಿನೊಂದಿಗೆ ವಿವಾಹ ನಿಶ್ಚಯ ಮಾಡಿದ್ದರು. ನಂದ್ ನೆಂಟಸ್ತಿಕೆಯನ್ನು ಮುರಿದು ವೈರಾಗಿಯಾಗಿ ಕವನಗಳನ್ನು ರಚಿಸತೊಡಗಿದ.

ರಾಜಬೀಬಿ ಗುಜರಾತ್ ಜಿಲ್ಲೆಯ ಮಾಂಗಾ ಗ್ರಾಮದವಳು. ಎದುರು ಬದುರು ನೆಂಟಸ್ತಿಕೆ ಅಂಗವಾಗಿ ವಿವಾಹವಾದಳು. ಆಕೆಯ ಕೈ ಹಿಡಿದವನು ಸೈನ್ಯದಲ್ಲಿ ಭರ್ತಿಯಾಗಿದ್ದ. ಮುಂದೆ ಅವನ ಸುದ್ದಿಯೇ ಇಲ್ಲವಾಯಿತು. ನೊಂದು ನಿರಾಶೆಗೊಂಡು ಆಕೆ ಗುಜರಾಂವಾಲಾದ ಒಂದು ಪುಟ್ಟ ಶಾಲೆಯಲ್ಲಿ ಪಾಠ ಮಾಡತೊಡಗಿದಳು. ಶಾಲೆಗೆ ಹೋಗುವ ಮುನ್ನ ಆಕೆ ತನ್ನ ಅತ್ತಿಗೆ ಜೊತೆ ದಯಾಲಜಿ ಆಶ್ರಮದಲ್ಲಿ ನೆಲಕ್ಕೆ ಹಣೆಯೂರಿ ನಮಿಸುತ್ತಿದ್ದಳು. ಸೋದರ ತೀರಿ ಹೋಗಿದ್ದ ಅತ್ತಿಗೆ ವಿಧವೆಯಾದಳು. ಈಗ ಇಬ್ಬರೂ ಏಕಾಂಗಿ ಹಾಗೂ ಮನನೊಂದವರು. ಒಂದೇ ಶಾಲೆಯಲ್ಲಿ ಪಾಠ ಮಾಡುತ್ತಿದ್ದರು, ಒಟ್ಟಿಗೇ ವಾಸವಾಗಿದ್ದರು. ಒಂದು ದಿನ ಇಬ್ಬರೂ ದಯಾಲಜಿ ಆಶ್ರಮಕ್ಕೆ ಹೋದಾಗ ಧೋ ಧೋ ಮಳೆ ಸುರಿಯತೊಡಗಿತು. ದಯಾಲಜಿ ಮಳೆ ನಿಲ್ಲುವವರೆಗೆ ಹೊತ್ತು ಕಳೆಯಲು ತಮ್ಮ ಬಾಲಕಾ ಸಾಧುವಿಗೆ ಕವನ ವಾಚನ ಮಾಡೆಂದು ಹೇಳಿದರು. ಆತ ಯಾವತ್ತೂ ಕಣ್ಣು ಮುಚ್ಚಿಕೊಂಡು ಕವನ ಕೇಳುತ್ತಿದ್ದರು. ಅವರು ಅಂದು ಕಣ್ಣು ತೆರೆದಾಗ, ನಂದ್‌ನ ಕಣ್ಣು ರಾಜಬೀಬಿಯ ಮುಖದ ಕಡೆ ಸುಳಿಯತೊಡಗಿದ್ದನ್ನು ಗಮನಿಸಿದರು. ಕೆಲ ದಿನಗಳ ನಂತರ ರಾಜಬೀಬಿಯ ಗೋಳಿನ ಕತೆ ಕೇಳಿದರು. ''ಮಗು ನಂದ್, ವೈರಾಗ್ಯ ನಿನಗೆ ಸಲ್ಲದು. ಈ ಕಾವಿ ಬಟ್ಟೆ ಕಳಚಿ ಗೃಹಸ್ಥಾಶ್ರಮ ಪ್ರವೇಶಿಸು,'' ಎಂದರು.

ಇದೇ ರಾಜಬೀಬಿ ನನ್ನ ತಾಯಿಯಾದಳು ಹಾಗೂ ನಂದ್ ನನ್ನ ತಂದೆ. ನಂದ್ ಗ್ರಹಾಸ್ಥಶ್ರಮ ಪ್ರವೇಶಿಸಿದ ಮೇಲೆ ಕರತಾರಸಿಂಗ್ ಎಂಬ ಹೆಸರಿನ್ನಿಟ್ಟುಕೊಂಡರು. ಕವನ ಬರೆಯುತ್ತಿದ್ದರು. ಹೀಗಾಗಿ 'ಪಿಯೂಷ್' ಕಾವ್ಯನಾಮ ಆಯ್ಕೆ ಮಾಡಿಕೊಂಡರು. ಹತ್ತು ವರ್ಷಗಳ ನಂತರ ನಾನು ಹುಟ್ಟಿದಾಗ ಪಿಯೂಷ್ ಶಬ್ದದ ಪಂಜಾಬೀಕರಣ ಮಾಡಿ ನನಗೆ ಅಮೃತಾ ಎಂದು ನಾಮಕರಣ ಮಾಡಿದರು. ತಮ್ಮ ಕಾವ್ಯನಾಮವನ್ನು 'ಹಿತಕಾರಿ' ಎಂದಿಟ್ಟುಕೊಂಡರು.

ಬಡತನ ಹಾಗೂ ಸಿರಿತನ ಎರಡೂ ನನ್ನ ತಂದೆಯ ಜಾಯಮಾನವಾಗಿದ್ದವು. ಒಮ್ಮೆ ಅವರ ಒಬ್ಬ ಗುರು-ಸೋದರ (ಸಂತ್ ದಯಾಲಜಿಯ ಇನ್ನೊಬ್ಬ ಶಿಷ್ಯ ) ಕರ್ತಾರಸಿಂಗ್, ತನ್ನ ಅಣ್ಣ ತನಗೆ ಮದುವೆ ಮಾಡಿಸಬೇಕೆಂದಿದ್ದಾನೆ ಎನ್ನತೊಡಗಿದ. ಒಳ್ಳೆಯ ನೆಂಟಸ್ತಿಕೆ ಇನ್ನೇನು ಮುರಿದು ಬೀಳುವುದರಲ್ಲಿತ್ತು, ಏಕೆಂದರೆ ಅವನಿಗೆ ವಾಸಕ್ಕೆ ಒಂದು ಮನೆ ಇರಲಿಲ್ಲ. ತಂದೆಯ ವಶದಲ್ಲಿ ಅವರ ಅಜ್ಜನ ಆಸ್ತಿ ಪೈಕಿ ಇನ್ನೂ ಒಂದು ಮನೆ ಇತ್ತು. ''ಇಷ್ಟು ಸಣ್ಣ ನೆಪದಿಂದ ಅವನ ವಿವಾಹ ನೆರವೇರುವುದಿಲ್ಲವೆಂದರೆ ನನ್ನ ಮನೆಯನ್ನು ಅವನ ಹೆಸರಿಗೆ ಬರೆದುಕೊಡುವೆ,'' ಎಂದರು. ತಮ್ಮ ಏಕೈಕ ಮನೆಯನ್ನು ಅವನಿಗೆ ಬರೆದುಕೊಟ್ಟರು. ಜೀವನ ಪರ್ಯಂತ ಅವರು ಬಾಡಿಗೆ ಮನೆಯಲ್ಲೇ ಇದ್ದರು. ಸ್ವಂತದ ಮನೆ ಮಾಡುವುದ ಸಾಧ್ಯವಾಗಲಿಲ್ಲ. ಅವರು ಮುಖ ಸಣ್ಣದು ಮಾಡಿದ್ದನ್ನು ನಾನೆಂದೂ ನೋಡಲಿಲ್ಲ.

ಆದರೆ ನಾನು ಅವರ ಮುಖದಲ್ಲಿ ಒಂದು ಬಹು ತೀವ್ರವಾದ ನೋವಿನ ಗೆರೆ ಮೂಡಿದ್ದನ್ನು ನೋಡಿದೆ. ನಾನು ಸುಮಾರು ಹತ್ತು ಹನ್ನೊಂದು ವರ್ಷದವಳಾದಾಗ ನನ್ನ ತಾಯಿ ತೀರಿ ಹೋದಳು. ಅವರು ಮತ್ತೆ ಬದುಕಿನಿಂದ ವಿಮುಖರಾದರು. ಆದರೆ ನಾನು ಅವರಿಗೆ ಒಂದು ದೊಡ್ಡ ಬಂಧನವಾಗಿದ್ದೆ. ಮೋಹ ಹಾಗೂ ವೈರಾಗ್ಯ ಅವರನ್ನು ಪರಸ್ಪರ ವಿರುದ್ಧ ದಿಕ್ಕಿನತ್ತ ಎಳೆಯುತ್ತಿದ್ದವು. ಎಷ್ಟೋ ಕ್ಷಣಗಳು ಎಂಥವಿದ್ದವೆಂದರೆ.... ನಾನು ಬಿಕ್ಕಿ ಬಿಕ್ಕಿ ಅಳುತ್ತಿದ್ದೆ. ನಾನು ಅವರಿಗೆ ಬೇಕಾಗಿದ್ದೆನೋ ಬೇಡವಾಗಿದ್ದೆನೋ ನನಗೆ ತಿಳಿಯದಾಗುತ್ತಿತ್ತು.

ನನ್ನ ಅಸ್ತಿತ್ವ ಏಕ ಕಾಲಕ್ಕೆ ಅಪೇಕ್ಷಿತವೂ ಅನಪೇಕ್ಷಿತವೂ ಆಗಿದೆ ಎನಿಸುತ್ತಿತ್ತು.

ಪ್ರಾಸ ಕುರಿತ ಲೆಕ್ಕ ಹೇಳಿಕೊಟ್ಟ ನನ್ನ ತಂದೆ ನಾನು ಬರೆಯುವುದನ್ನು ಅಪೇಕ್ಷಿಸಿದ್ದರು. ಬರೆಯತೊಡಗಿದೆ. ತಂದೆಯ ದೃಷ್ಟಿಯಲ್ಲಿ ನಾನು ಎಷ್ಟೇ ಬೇಡಾದವಳಾಗಿದ್ದರೂ ಆದು ಬೇಕಾದವಳೆನಿಸಿಕೊಳ್ಳುವುದಕ್ಕಾಗಿಯೇ ಎಂದು ಅಂದುಕೊಂಡೆ.

ಇಂದು ಅರ್ಧ ಶತಮಾನದ ನಂತರ ಚಿಂತನೆ ಮಾಡುತ್ತಿದ್ದೇನೆ. ಬಡತನ ಹಾಗೂ ಸಿರಿತನಗಳೆರಡೂ

ಏಕಕಾಲಕ್ಕೆ ನನ್ನ ಜಾಯಮಾನವಾದಂತೇ, ಈ ಸ್ವಭಾವ, ನನ್ನ ಮುಖ ಲಕ್ಷಣದಂತೇ ನನ್ನ ತಂದೆಯಿಂದ ಪಡೆದಿದ್ದೇನೆ. ಪ್ರಾಯಃ ಅವರ ದೃಷ್ಟಿ ಕೂಡ ನನ್ನ ದೃಷ್ಟಿಯಲ್ಲಿ ಶಾಮೀಲಾಗಿ ಬಿಟ್ಟಿದೆ. ಒಮ್ಮೊಮ್ಮೆ ನಾನು ನನ್ನ ದೃಷ್ಟಿಯಲ್ಲಿ ಸ್ವೀಕಾರಾರ್ಹಗಳೋ ಅಲ್ಲವೋ ತಿಳಿಯದಾಗುತ್ತದೆ. ಪ್ರಾಯಃ ಈ ಕಾರಣಕ್ಕಾಗಿಯೆ ನನ್ನ ದೃಷ್ಟಿಯಲ್ಲಿ ಯಾವುದೆಲ್ಲ ಅನಿಷ್ಟವೊ ಅದು ನನ್ನ ಇಷ್ಟವಾದದ್ದಾಗಲೆಂದು ನಾನು ಜೀವನವಿಡೀ ಬರೆಯುತ್ತಲಿದ್ದೇನೆ.

ಹೇಗೆ ಆಗಲೂ ಜಗತ್ತಿನ ಬಗ್ಗೆ ಯೋಚಿಸುತ್ತಿರಲಿಲ್ಲವೊ- ತಂದೆ ನನ್ನೊಟ್ಟಿಗೆ ಸಂತೋಷದಿಂದಿರಲಿ ಎಂದು ಯೋಚಿಸುತ್ತಿದ್ದೆ ಈಗಲೂ ಜಗತ್ತಿನ ಬಗ್ಗೆ ಯೋಚಿಸುತ್ತಿಲ್ಲ - ನನ್ನವರು ನನ್ನೊಂದಿಗೆ ಸಂತೋಷದಿಂದಿರಲಿ ಎಂದು ಯೋಚಿಸುತ್ತೇನೆ.

ತಂದೆಗೆ ಎಂದೂ ಸುಳ್ಳು ಹೇಳಲಿಲ್ಲ, ನನಗೆ ನಾನೇ ಎಂದೂ ಸುಳ್ಳು ಹೇಳಲಾರೆ.......

ಇದು ಒಂದು ಆ ಕ್ಷಣ.......

ಮನೆಯಲ್ಲಿ ಅಲ್ಲವಾದರೂ, ಅಡುಗೆ ಮನೆಯಲ್ಲಿ ಅಜ್ಜಿಯ (ನನ್ನ ತಾಯಿಯ ತಾಯಿ) ಆಡಳಿತವಿತ್ತು, ನಾನು ಎಲ್ಲಕ್ಕೂ ಮೊದಲ ಬಂಡಾಯ ಮಾಡಿದ್ದು ಆಕೆಯ ಆಡಳಿತದಲ್ಲಿ, ಅಟ್ಟದ ಮೇಲೆ ಮೂರು ಗ್ಲಾಸುಗಳು, ಉಳಿದ ಪಾತ್ರೆಗಳಿಂದ ಪ್ರತ್ಯೇಕವಾಗಿ ಒಂದು ಮೂಲೆಯಲ್ಲಿ ಬಿದ್ದುಕೊಂಡಿರುವುದನ್ನು ನೋಡುತ್ತಿದ್ದೆ. ತಂದೆಯ ಮುಸಲ್ಮಾನ ಗೆಳೆಯರು ಮನೆಗೆ ಬಂದಾಗ ಅವರಿಗೆ ಚಹ ಇಲ್ಲಾ ಲಸ್ಸಿ ಕುಡಿಸಬೇಕಾದಾಗ ಈ ಗ್ಲಾಸುಗಳನ್ನು ಅಟ್ಟದ ಮೇಲಿಂದ ಕೆಳಗಿಳಿಸಿಕೊಳ್ಳಲಾಗುತ್ತಿತ್ತು. ಅದಾದ ನಂತರ ಅವುಗಳನ್ನು ಸ್ವಚ್ಛವಾಗಿ ತೊಳೆದು ಮತ್ತೆ ಅಲ್ಲೇ ಇರಿಸಲಾಗುತ್ತಿತ್ತು.

ಆ ಮೂರು ಗ್ಲಾಸ್‌ಗಳೊಂದಿಗೆ ನಾನೂ ಒಂದು ಗ್ಲಾಸ್ ಆಗಿ ಬೆರೆತುಕೊಂಡೆ. ನಾವು ನಾಲ್ವರೂ ಅಜ್ಜಿಯ ವಿರುದ್ಧ ಹೋರಾಟಕ್ಕಿಳಿದೆವು. ಆ ಗ್ಲಾಸುಗಳು ಉಳಿದ ಪಾತ್ರೆಗಳನ್ನು ಸ್ಪರ್ಶಿಸುವುದು ಸಾಧ್ಯವಿಲ್ಲವೆಂದರೆ ನಾನು ಕೂಡ ಬೇರೆ ಯಾವ ಪಾತ್ರೆಯಲ್ಲೂ ನೀರು ಕುಡಿಯುವುದಿಲ್ಲ, ಹಾಲು ಚಹ ಸಹ ಕುಡಿಯುವುದಿಲ್ಲವೆಂದು ಹಟ ಹಿಡಿದೆ. ಅಜ್ಜಿ ಆ ಗ್ಲಾಸುಗಳನ್ನು ಖಾಲಿ ಇಡಬಹುದಿತ್ತು, ಆದರೆ ನನ್ನನ್ನು ಹಸಿದ, ನೀರಡಿಸಿದ ಸ್ಥಿತಿಯಲ್ಲಿರಿಸುವುದು ಸಾಧ್ಯವಿರಲಿಲ್ಲ, ಕೆಲವು ಗ್ಲಾಸುಗಳನ್ನು ಹೀಗೆ ಪ್ರತ್ಯೇಕವಾಗಿ ಇರಿಸಲಾಗುತ್ತಿದೆ ಎನ್ನುವುದು ತಂದೆಯವರಿಗೆ ಇನ್ನೂ ತನಕ ಗೊತ್ತಿರಲಿಲ್ಲ, ಇದು ಅವರಿಗೆ ಗೊತ್ತಾಗುತ್ತಲೇ ನನ್ನ ಬಂಡಾಯಕ್ಕೆ ಜಯವಾಯಿತು. ಮತ್ತೆಂದೂ ಯಾವ ಪಾತ್ರೆಯೂ ಹಿಂದೂ ಆಗಿ ಇಲ್ಲಾ ಮುಸಲ್ಮಾನ ಆಗಿ ಉಳಿಯಲಿಲ್ಲ.

ನಾನು ದೊಡ್ಡವಳಾದ ಮೇಲೆ, ಯಾವ ಧರ್ಮದ ಜನರಿಗಾಗಿ ಮನೆಯಲ್ಲಿ ಪಾತ್ರೆಗಳನ್ನು ಪ್ರತ್ಯೇಕವಾಗಿರಿಸಲಾಗುತ್ತಿತ್ತೋ ಅದೇ ಧರ್ಮದ ವ್ಯಕ್ತಿಯನ್ನು ಬದುಕಿನ ಎಷ್ಟೋ ವರ್ಷಗಳವರೆಗೆ ಪ್ರೀತಿಸುವವಳಿದ್ದೆನೆನ್ನುವುದು ಆ ಕ್ಷಣ ಅಜ್ಜಿಗೂ ಗೊತ್ತಿರಲಿಲ್ಲ, ನನಗೂ ಗೊತ್ತಿರಲಿಲ್ಲ. ಸಾಧ್ಯತೆಯನ್ನು ಮುಂಗಾಣುವುದೂ ಸಾಧ್ಯವಿರಲಿಲ್ಲ. ಆದರೆ ಆ ಕ್ಷಣ ಅದರ ಪ್ರತಿಬಿಂಬವನ್ನೇ ಬಾಲ್ಯದಲ್ಲಿ ನೋಡಿದೆನೇನೋ.

ಪ್ರತಿಬಿಂಬಗಳು ಸಹ ಬಲು ಗಟ್ಟಿಯಾದ ಸತ್ಯಗಳಾಗಿರುತ್ತವೆ.

ಮುಖಗಳೂ ವಾಸ್ತವತೆಗಳಾಗಿರುತ್ತವೆ. ಆದರೆ ಎಷ್ಟು ಕಾಲ? ಪ್ರತಿಬಿಂಬಗಳು ಎಷ್ಟು ಕಾಲ ಬೇಕೆನಿಸುವುದೋ ಅಷ್ಟು ಕಾಲದವರೆಗೆ, ಬೇಕೆಂದರೆ ಜೀವನ ಪರ್ಯಂತ ವಾಸ್ತವವಾಗಿರುತ್ತವೆ. ವರ್ಷಗಳು ಬರುತ್ತವೆ, ಕಳೆದು ಹೋಗುತ್ತವೆ, ನಿಲ್ಲಲಾರವು. ಆದರೆ ಎಷ್ಟೋ ಪ್ರತಿಬಿಂಬಗಳು ಎಂದಾದರೂ ಎಲ್ಲಾದರೂ ನಿಂತರೆ ಅಲ್ಲೇ ನಿಂತು ಬಿಡುತ್ತವೆ.....

ಹಾಗೆಲ್ಲ ಪ್ರತಿಯೊಂದು ಪ್ರತಿಬಿಂಬ ಯಾವುದೋ ವಸ್ತುವಿನ ಪ್ರತಿಬಿಂಬವಾಗಿರುತ್ತದೆ, ವಸ್ತುವನ್ನು ಅವಲಂಬಿಸಿರುತ್ತದೆ. ಆದರೆ ಕೆಲವು ಪ್ರತಿಬಿಂಬಗಳು ಈ ನಿಯಮಕ್ಕೆ ಹೊರತಾಗಿರುತ್ತವೆ; ವಸ್ತುವಿನಿಂದ ಸ್ವತಂತ್ರವಾಗಿರುತ್ತವೆ.

ಹೀಗೂ ಆಗುವ ಸಾಧ್ಯತೆ ಇದೆ : ಪ್ರತಿಯೊಂದು ಪ್ರತಿಬಿಂಬ ಎಲ್ಲಿಂದಲೋ ಯಾವುದೋ ವಸ್ತುವಿನಿಂದ ಸಿಡಿದು ನಿಮ್ಮ ಬಳಿ ಸಾರಬಹುದು ; ನೀವು ಆ ಪ್ರತಿಬಿಂಬವನ್ನು ತೆಗೆದುಕೊಂಡು ಜಗತ್ತನ್ನು ಸುತ್ತುತ್ತಿರಬಹುದು: ಇದು ಯಾವ ವಸ್ತುವಿನಿಂದ ಸಿಡಿದು ಬಂದಿದೆಯೊ ಆ ವಸ್ತು ಯಾವುದೆಂದು ಸಂಶೋಧನೆಗೆ ತೊಡಗಬಹುದು. ತಪ್ಪು ತಿಳಿವಳಿಕೆ ಬಗ್ಗೆ ಹೇಳುವುದೇನಿದೆ? ತಪ್ಪು ತಿಳಿವಳಿಕೆ ಆಗಿಯೇ ಆಗುತ್ತದೆ. ನೀವು ಈ ಪ್ರತಿಬಿಂಬವನ್ನು ಇತರರೊಂದಿಗೆ ಅಡಿಯಿಂದ ಮುಡಿಯವರೆಗೆ ಹೋಲಿಸಿ ನೋಡುತ್ತೀರಿ. ಅವನದೇ

ಅಳತೆಯದಾಗಿರಲೂಬಹುದು ! ಆಗಿರದಿದ್ದರೆ ತಪ್ಪೇನಿಲ್ಲ. ನೀವು ಮತ್ತೆ ಅದನ್ನು - ಕತ್ತಲೆಯಂತಿರುವುದನ್ನು - ಹಿಡಿದುಕೊಂಡು ಅಲ್ಲಿಂದ ಹೊರಟು ಬಿಡುತ್ತೀರಿ.......

ನನ್ನದೂ ಒಂದು ಪ್ರತಿಬಿಂಬವಿತ್ತು.

ಹೆಸರಿನಿಂದೇನಾಗಬೇಕಿದೆ ? ಅವನಿಗೊಂದು ಹೆಸರು ಸಹ ಇಟ್ಟಿದ್ದೆ ರಾಜನ್ ಎಂದು. ಮಲಗುವ ಮುನ್ನ 'ಸೋಹಿಲೆ' ಕೀರ್ತನವನ್ನು ಪಠಿಸಬೇಕೆಂಬುದು ಮನೆಯ ಒಂದು ನಿಯಮವಿತ್ತು. ಈ ಸಂಬಂಧ ತಂದೆಯವರಿಗಿದ್ದ ವಿಶ್ವಾಸವೆಂದರೆ ಇದನ್ನು ಓದುತ್ತಾ ಹೋದಂತೆ ನಿಮ್ಮ ಸುತ್ತ ಒಂದು ಕೋಟೆಯ ನಿರ್ಮಾಣವಾಗುತ್ತಿರುತ್ತದೆ, ಪಾಠದ ಸಮಾಪ್ತಿಯಾಗುತ್ತಲೇ ರಾತ್ರಿ ಇಡೀ ನೀವು ಕೋಟೆಯ ರಕ್ಷಣೆಯಲ್ಲಿರುತ್ತೀರಿ ಹಾಗೂ ಇಡೀ ರಾತ್ರಿ ಹೊರಗಿನಿಂದ ಯಾರೂ ಈ ಕೋಟೆಯನ್ನು ಪ್ರವೇಶಿಸುವುದು ಅಸಾಧ್ಯವಾಗುತ್ತದೆ. ನೀವು ಎಲ್ಲ ವಿಧದ ಚಿಂತೆಯಿಂದ ಮುಕ್ತರಾಗಿ ಇಡೀ ರಾತ್ರಿ ಮಲಗಬಲ್ಲಿರಿ.

ಈ ಪಠಣವನ್ನು ಮಲಗುವ ಸಮಯದಲ್ಲಿ ಮಾಡಬೇಕಾಗುತ್ತಿತ್ತು. ಕಣ್ಣಲ್ಲಿ ನಿದ್ರೆ ತುಂಬಿರುತ್ತಿತ್ತು. ನಿದ್ರೆ ಅದೆಷ್ಟು ಒತ್ತರಿಸಿ ಬರುತ್ತಿತ್ತೆಂದರೆ ಅದರ ರಭಸದ ದಾಳಿಯಿಂದಾಗಿ ಅದು ಅರೆಬರೆಯಾಗಬಹುದಿತ್ತು. ಆದ್ದರಿಂದ ಕೊನೆಯ ಪಂಕ್ತಿಯವರೆಗೆ ಅದನ್ನು ಪೂರ್ತಿಗೊಳಿಸಬೇಕೆಂದು ಈ ಸಂಬಂಧ ಅವರು ಹೇಳುತ್ತಿದ್ದರು. ಕೊನೆಯ ಪಂಕ್ತಿಗಳನ್ನು ಬಿಟ್ಟರೆ ಕೋಟೆಯ ನಿರ್ಮಾಣದಲ್ಲಿ ಅರೆಕೊರೆ ಉಳಿದುಕೊಳ್ಳಬಹುದು ಹಾಗೂ ಅದು ಪೂರ್ಣ ರಕ್ಷಣೆ ನೀಡಲಾರದು. ಹೀಗಾಗಿ ಕೊನೆಯ ಪಂಕ್ತಿತನಕ ಈ ಪಠಣ ನಡೆಯಬೇಕಿತ್ತು.

ಪುಟ್ಟ ಮಗುವಾಗಿದ್ದೆ. ಈ ಪಾಠದ ನಂತರ ನನ್ನ ಸುತ್ತ ಕೋಟೆ ನಿರ್ಮಾಣಗೊಂಡರೆ ಮತ್ತೆ ರಾಜನ್ ನನ್ನ ಕನಸಿನಲ್ಲಿ ಹೇಗೆ ಬರಬೇಕೆಂಬುದು ನನ್ನ ಚಿಂತೆಯಾಗಿತ್ತು. ನಾನು ಕೋಟೆಯೊಳಗೆ ಇರುತ್ತೇನೆ, ಆತ ಕೋಟೆಯ ಹೊರಗೆ ಉಳಿದು ಬಿಡುತ್ತಾನೆ..... ಪಾಠ ಬಾಯಿಪಾಠ ಆಗಿದೆ, ನನ್ನ ಮಂಚದ ಮೇಲೆ ಕೂತುಕೊಂಡು ಮೆಲ್ಲ ಮೆಲ್ಲನೆ ಪಠಿಸಬೇಕಿದೆ. ಉದ್ದೇಶಪೂರ್ವಕವಾಗಿ ಅದರ ಕೆಲವು ಸಾಲುಗಳನ್ನು ಬಿಟ್ಟು ಬಿಡುವೆ, ಕೋಟೆ ಪೂರ್ತಿಯಾಗಿ ಮುಚ್ಚಿ ಬಿಡುವುದಿಲ್ಲ ಹಾಗೂ ಆತ ತೆರೆದೆಡೆಯಿಂದ ನುಸುಳಿ ಬರಬಲ್ಲನು.... ಎಂದು ಯೋಚಿಸಿದೆ.

ಆದರೆ ತಂದೆಯವರು ಈ ನಿಯಮದ ರೂಪವನ್ನು ಬದಲಿಸಿದರು. ಎಲ್ಲರೂ ತಮ್ಮ ತಮ್ಮ ಮಂಚದ ಮೇಲೆ ಕುಳಿತುಕೊಂಡು ಪ್ರತ್ಯೇಕವಾಗಿ ಪಾಠ ಮಾಡಬೇಕೆನ್ನುವ ಬದಲಾಗಿ ಮಂಚದ ಮೇಲೆ ಕುಳಿತುಕೊಂಡು ನಾನು ಎತ್ತರದ ದನಿಯಲ್ಲಿ ಪಾಠ ಮಾಡಬೇಕು ಹಾಗೂ ಉಳಿದವರೆಲ್ಲರೂ ತಮ್ಮ ತಮ್ಮ ಮಂಚದ ಮೇಲೆ ಕುಳಿತುಕೊಂಡು ಕೇಳಬೇಕೆನ್ನುವ ನಿಯಮವನ್ನು ಅವರು ರೂಪಿಸಿದರು. ದೂರದ ಸಂಬಂಧಿಗಳ ಪೈಕಿ ಒಬ್ಬ ಹುಡುಗ ಹಾಗೂ ಪುಟ್ಟ ಹೆಣ್ಣು ಮಗು ತಂದೆಯ ಜೊತೆಗೇ ಇದ್ದು ಓದುತ್ತಿದ್ದರು ಹಾಗೂ ಈ ಪುಟ್ಟ ಮಗುವಿಗೆ ಈ ಪಾಠ ಕಂಠಪಾಠವಾಗುತ್ತಿರಲಿಲ್ಲ ಎನ್ನುವುದಕ್ಕಾಗಿರಬೇಕು ಈ ನಿಯಮ.

ಹೀಗೆ ಪಾಠದ ಯಾವುದೇ ಸಾಲು ಬಿಟ್ಟು ಹೋಗಬಾರದಿತ್ತು. ಒಂದೆರಡು ಸಲ ಬಿಡುವ ಪ್ರಯತ್ನ ಮಾಡಿದೆ. ಆದರೆ ತಪ್ಪನ್ನು ಸರಿಪಡಿಸಿದ ತಂದೆಯವರು ಆ ಪಂಕ್ತಿಗಳನ್ನೂ ಓದಿಸುತ್ತಿದ್ದರು. ಮುಂದೆ ತುಂಬ ಯೋಚನೆ ಮಾಡಿ ಒಂದು ಉಪಾಯ ಮಾಡಿದೆ. 'ಸೋಹಿಲೆ'* ಕೀರ್ತನವನ್ನು ಪಠಿಸುವ ಮುಂಚೆ ನಾನು ರಾಜನ್‌ನನ್ನು ಧ್ಯಾನಿಸಿ ಅವನನ್ನು ನನ್ನ ಬಳಿ ಕರೆಯಿಸಿಕೊಳ್ಳುವುದು. ಹಾಗೆ ಮಾಡಿದರೆ ಆತ ಕೋಟೆ ಗೋಡೆಗಳು ನಿರ್ಮಾಣಗೊಳ್ಳುವ ಮೊದಲೇ ಕೋಟೆಯೊಳಗೆ ಬಂದು ಬಿಡಲಿ ಎನ್ನುವುದು ನನ್ನ ಉಪಾಯ.

ಆಗ ಹತ್ತು ವರ್ಷದವಳಿದ್ದೆ. ಇಂದು ನಲವತ್ತು ವರ್ಷಗಳ ನಂತರ ಆ ಪ್ರಸಂಗ ಕುರಿತು ಯೋಚಿಸಿದಾಗ ಯಾವುದೋ ಅಸ್ತಿತ್ವದಲ್ಲಿ ನನಗೆ ಆಸಕ್ತಿ ಇದ್ದಿರಬಹುದಾದರೂ ಅದು ವ್ಯರ್ಥವಾಗಲಿಲ್ಲ ಎನಿಸುತ್ತಿದೆ. ನನ್ನ ಸುತ್ತ ರಕ್ಷಣಾತ್ಮಕ ಕೋಟೆಗಳ ನಿರ್ಮಾಣವೂ ಆಗಿದೆ, ಬಿದ್ದೂ ಹೋಗಿದೆ. ಆದರೆ ಅವನ ಅಸ್ತಿತ್ವ ಒಂದಿಲ್ಲೊಂದು ರೂಪದಲ್ಲಿ ನನ್ನ ಬಳಿ ಇದ್ದೇ ಇದೆ - ಒಮ್ಮೆ ಮನುಷ್ಯನ ರೂಪದಲ್ಲಿ, ಒಮ್ಮೆ ಲೇಖನಿಯ ರೂಪದಲ್ಲಿ ಹಾಗೂ ಒಮ್ಮೆ ದೇವರ ಅಸ್ತಿತ್ವದಂತೆಯೇ ಅನೇಕ ರೂಪಗಳಲ್ಲಿ - ಒಂದು ಪುಸ್ತಕದ ಪುಟಗಳಿಂದಲೂ ಹೊರಹೊಮ್ಮುತ್ತದೆ ಹಾಗೂ ಒಂದು ಕ್ಯಾನ್‌ವಾಸ್‌ದೊಳಗಿಂದಲೂ ಕೆಳಗಿಳಿದು ಹೊರಬರುತ್ತದೆ. ಹೊಗೆಯ ಮೋಡದಿಂದ ಕಿನ್ನರ ಪ್ರಕಟವಾಗುವಂತೆ ಅದು ಒಮ್ಮೊಮ್ಮೆ ಹಾಡಿನ ಸ್ವರದೊಳಗಿಂದ ಸಹ ಹೊರ ಬರುತ್ತದೆ; ಒಂದು ಅರಳುತ್ತಿರುವ ಹೂವಿನ ಪಕಳೆಯಿಂದಲೂ ಸಮುದ್ರದ ನೀರಿನಲ್ಲಿ ಹೊಯ್ದಾಡುತ್ತಿರುವ ಚಂದ್ರನ ಬಿಂಬದಿಂದಲೂ ಹೊರಬರುವುದುಂಟು. ಘೋರ ಏಕಾಕಿತನದ ಕಾಲಕ್ಕೆ ಅದು ನದಿಗಳನ್ನು ಸೀಳಿಕೊಂಡು ಸಂಧಿಸಿದೆ - ನನ್ನ ದೇಹದ ನರನಾಡಿಗಳಲ್ಲಿ ಹರಿಯುತ್ತಿರುವ ರಕ್ತದ

---

*'ಸೋಹಿಲೆ' ಎಂಬುದು ಗುರುಗ್ರಂಥದ ಒಂದು ವಿಶೇಷ ಭಾಗ.

ನದಿಗಳಲ್ಲಿ ಸೀಳಿಕೊಂಡು ಸಂಧಿಸಿದೆ. ಅದರ ಅಸ್ತಿತ್ವದೊಂದಿಗೆ ಮಸಕಾದ ಹಳದಿ ಬಣ್ಣದ ಕೆಂಪಾಗಿ ಬಿಡುತ್ತದೆ.

ಇದು ಈಗ ರಕ್ತ ಮಾಂಸದ್ದಾಗಿ ಕಂಡು ಬರುವ ದೇಹದಿಂದ ಹಿಡಿದು, ಬಣ್ಣ ಹಾಗೂ ಸುಗಂಧಗಳಿಂದ ಹಾಯ್ದು ವಿಚಾರಗಳು ಹಾಗೂ ಕನಸುಗಳ ಆ ಸೀಮೆಯವರೆಗೆ ವ್ಯಾಪಿಸುತ್ತದೆ. ಅಲ್ಲಿ ಒಬ್ಬ ದಾರಿಹೋಕನ ಸಣ್ಣದೊಂದು ಒಳ್ಳೆಯತನ ಕೂಡ ಅದರ ಅಸ್ತಿತ್ವದಂತೆ ಭಾಸವಾಗುತ್ತದೆ ಹಾಗೂ ಕಣ್ಣು ತುಂಬ ನೀರಾಡುತ್ತದೆ. ನನ್ನ ದೃಷ್ಟಿಯಲ್ಲಿ ಯಾವುದೂ ನಿರಾಕಾರವಲ್ಲ. ಪ್ರತಿಯೊಂದು ವಸ್ತುವಿನ ಅಸ್ತಿತ್ವ ರಕ್ತ ಮಾಂಸದಂತಿದ್ದು ಅದನ್ನು ಕೈಯಿಂದ ಮುಟ್ಟಬಲ್ಲೆ, ಅದರ ಅನುಭವ ನನ್ನ ದೇಹದೊಳಗೆ ಸಂಚರಿಸಬಲ್ಲದು.

ಬಾಲ್ಯದಲ್ಲಿ ಹರಗೋವಿಂದಜಿ ಇಲ್ಲಾ ಗೋವಿಂದಸಿಂಗ್‌ರ ಕನಸು ಬಿದ್ದಾಗ ನಾನು ಅವರ ಕುದುರೆಯನ್ನು, ಇಲ್ಲಾ ಗಿಡುಗವನ್ನು ಇಲ್ಲಾ ಕೊರಳಲ್ಲಿ ನೇತಾಡುತ್ತಿದ್ದ ಖಡ್ಗವನ್ನು ಕೈಯಿಂದ ಮುಟ್ಟಿ ನೋಡುತ್ತಿದ್ದೆ; ದೂರದಿಂದ ನಮಸ್ಕರಿಸುತ್ತಿರಲಿಲ್ಲ. ಅದೇ ರೀತಿ ಹೂವು ಹಾಗೂ ಚಿಗುರುಗಳನ್ನು ಬಾಚಿಕೊಳ್ಳುತ್ತಿದ್ದೆ - ಈಗಲೂ ಯಾರನ್ನಾದರೂ ತಬ್ಬಿಕೊಳ್ಳುವಂತೆ. ಇಡೀ ದೇಹ ಕಂಪಿಸಿ ಬಿಡುತ್ತದೆ. ಕಂಪನದಿಂದ ನನ್ನ ಉಸಿರಿನ ವೇಗ ವೃದ್ಧಿಸುತ್ತದೆ.

ತುಂಬ ದಿನಗಳ ಹಿಂದಿನ ಮಾತಿದು. ಒಮ್ಮೆ ಒಬ್ಬ ನನ್ನ ಬಳಿ ಕುಳಿತುಕೊಂಡಿದ್ದ. ಅವನ ಜೇಬಿನಲ್ಲಿದ್ದ ಕರವಸ್ತ್ರ ಹೊಲಸಾಗಿತ್ತು. ಅವನಿಗೆ ಕರವಸ್ತ್ರ ಅಗತ್ಯವಾದಾಗ ಅವನಿಗೆ ಹೊಸ ಕರವಸ್ತ್ರ ಕೊಟ್ಟು ಹೊಸದಾದ್ದನ್ನು ಮರಳಿ ಪಡೆದೆ. ನನ್ನ ಬಳಿ ಇಟ್ಟುಕೊಂಡೆ. ಅದು ತುಂಬ ದಿನಗಳವರೆಗೆ ನನ್ನ ಬಳಿ ಇತ್ತು. ಆ ಕರವಸ್ತ್ರ ಕೈಗೆ ಸಿಕ್ಕಾಗೆಲ್ಲ ಹಣೆಯ ನರಗಳು ಬಿಗಿದುಕೊಳ್ಳುತ್ತವೆ.

ಕೆಲವು ಬೀಜಗಳು ಅದೆಂಥವಿರುತ್ತವೆಯೊ. ಒಮ್ಮೆ ರಕ್ತ ಮಾಂಸದಲ್ಲಿ ಗಿಡವಾಗಿ ಬೆಳೆದರೆ ಮುಂದೆ ಎಂಥ ಭಯಂಕರ ಬಿರುಗಾಳಿ ಬೀಸಿದರೂ ಎಂಥ ಬರ ಬಿದ್ದರೂ ಅದರ ಎಲೆಗಳು ಉದುರಬಹುದು, ಟೊಂಗೆಗಳು ಮುರಿದು ಬೀಳಬಹುದು ಆದರೆ ಬೇರು ಸಮೇತ ಕಿತ್ತು ಹೋಗುವುದಿಲ್ಲ.

ಒಂದು 'ಯಾವುದೋ ಮುಖದ ಕಲ್ಪನೆ' ಹಾಗೂ ಎರಡನೇದು ''ಅಕ್ಷರಗಳ ಬಗೆಗಿನ ಆದರ'' ಇಂಥವೇ ಬೀಜಗಳಾಗಿದ್ದು ಅವು ನನ್ನೊಳಗೆ ಗಿಡವಾಗಿ ಬೆಳೆದಿದ್ದು ನನ್ನ ಬಾಲ್ಯದಲ್ಲೇ. ಮುಂದೆ ನಂಬಿಕೆಗಳು ಕುಸಿದವು. ಹೇಗೆ ಕುಸಿದವೆಂದರೆ ಇವೆರಡೂ ಗಿಡಗಳು ಬೇರು ಸಮೇತ ಕಿತ್ತು ಹೋಗಬೇಕಿತ್ತೆಂದು ಯೋಚಿಸುತ್ತೇನೆ. ಒಮ್ಮೊಮ್ಮೆ ಇವು ನಿರ್ನಾಮವಾದವೇನೋ ಎನಿಸುತ್ತಿತ್ತು. ಆದರೆ ಮನಸ್ಸಿನ ಮಣ್ಣಿಂದ ಅವುಗಳ ಮೊಳಕೆಗಳು ಅಂಕುರಿಸುತ್ತವೆ, ಟೊಂಗೆಗಳಾಗಿ ಬೆಳೆಯುತ್ತವೆ, ಚಿಗುರೊಡೆಯುತ್ತವೆ. ನನ್ನ ಉಸಿರಿನಿಂದ ಅವುಗಳ ಸುಗಂಧ ಹೊರಹೊಮ್ಮುತ್ತದೆ.

ಈ ಮಾಂತ್ರಿಕ ಗಿಡಗಳಲ್ಲೊಂದನ್ನು ನಾನೇ ಕೈಯಾರೆ ಬೆಳೆಸಿದ್ದೆ ಹಾಗೂ ಇನ್ನೊಂದನ್ನು ನನ್ನ ತಂದೆ. ಒಂದು ಪುಸ್ತಕದ ಪುಟ ನೆಲದ ಮೇಲೆ ಬಿದ್ದಿದ್ದರೆ ಅವರು ಅದನ್ನು ತುಂಬ ಆದರದೊಂದಿಗೆ ಎತ್ತಿಕೊಳ್ಳುತ್ತಿದ್ದರು. ಒಂದು ವೇಳೆ ತಪ್ಪಿ ನಾನೇನಾದರೂ ಅದನ್ನು ತುಳಿದರೆ ಅವರಿಗೆ ಸಿಟ್ಟು ಬರುತ್ತಿತ್ತು. ಅಕ್ಷರಗಳ ಬಗೆಗೆ ನನ್ನ ಮನದಾಳದಲ್ಲಿ ಅಪಾರವಾದ ಆದರದ ಭಾವನೆ ಮೂಡಿತು. ಜೊತೆಗೆ ಕೈಯಲ್ಲಿ ಲೇಖನಿ ಹಿಡಿದವರ ಬಗ್ಗೆ ಸಹ. ಗುರಬಾನಿ* ಪ್ರಕಾಂಡ ವಿದ್ವಾನರಾದ ಬಾಯಿ ರೌಹನ್ ಸಿಂಗ್ ಜಿ ತಂದೆಯವರ ಗೆಳೆಯರಾಗಿದ್ದರೆಂದು ಗೊತ್ತಾಯಿತು. ಅವರು ಬಂದಾಗಲೆಲ್ಲ ಮನೆಯ ಹೊಸ್ತಿಲು ಕೂಡ ಆದರದಿಂದ ತುಂಬಿ ತುಳುಕುತ್ತಿತ್ತು. ತಂದೆಯ ಗುರುಗಳಾದ ಸಂಸ್ಕೃತದ ವಿದ್ವಾಂಸ ದಯಾಲಜಿಯವರ ಭಾವಚಿತ್ರವನ್ನು ಅವರು ತಲೆ ಇಟ್ಟು ಮಲಗುವ ಕಡೆ ತೂಗು ಹಾಕಲಾಗಿತ್ತು. ಅತ್ತ ಕಡೆ ಕಾಲು ಚಾಚಿ ಮಲಗುವುದನ್ನು ನಿಷೇಧಿಸಲಾಗಿತ್ತು. ಹೀಗಾಗಿ ದೊಡ್ಡವಳಾದ ಮೇಲೆ ನನ್ನ ಕಾಲದ ಲೇಖಕರ ಬಗ್ಗೆ ನನಗೆ ಗೌರವವಿರುವಂತಾಯಿತು. ಆದರೆ ನನ್ನ ಸಮಕಾಲೀನರಿಂದ ನನಗೆ ಅದೆಷ್ಟು ನೋವಿನ ಅನುಭವಗಳಾದವೆಂದರೆ ಅಕ್ಷರಗಳು ಹಾಗೂ ಲೇಖನಿ ಬಗೆಗಿನ ಆದರದ ಗಿಡ ಬೇರು ಸಮೇತ ಒಣಗಿ ಹೋಗಲಿಲ್ಲವೇಕೆಂದು ಆಶ್ಚರ್ಯವಾಗುತ್ತದೆ.

ಯಾರೊಂದಿಗೆ ನನ್ನ ಸಂಪರ್ಕ ಬಂದಿತೋ ಅವರೇ ಮಾತ್ರ ಸಮಕಾಲೀನರೇ ಎಂದು ಯೋಚಿಸುತ್ತೇನೆ. ದೇಶ ಹಾಗೂ ಕಾಲದ ಗಡಿಗಳನ್ನು ಮೀರಿದವರಿದ್ದಾರೆ. ಅದೆಷ್ಟೋ ಕಜಾನ್ ಜಾಕೆಸ್‌ರು ನನ್ನ ಈ ಅಕ್ಷರಗಳು ಹಾಗೂ ಲೇಖನಿಗಳ ಬಗೆಗಿನ ಗೌರವದ ಗಿಡವನ್ನು ನೀರೆರೆದು ಪೋಷಿಸಿದ್ದಾರೆ. ಮುಂದೆ ಈ ಗಿಡವೂ ಹಸಿರಾಗಿ ನಳನಳಿಸುತ್ತಾ ಉಳಿದಿದ್ದಕ್ಕೆ ನಾನೇಕೆ ಆಶ್ಚರ್ಯಚಕಿತಳಾಗಿದ್ದೇನೆ? ☐☐

('ರಸೀತಿ ತಿಕೀಟು' - ಹಸನ್ ನಯೀಂ ಸುರಕೋಡ ಅವರ ಕನ್ನಡಾನುವಾದದ ಪುಸ್ತಕದಿಂದ ಆಯ್ದದ್ದು.)

---

*ಗುರುವಾಣಿ.

## ಮಲೇರಿಯಾ ನಿಯಂತ್ರಣದಲ್ಲಿ ಸಮುದಾಯದ ಸಹಭಾಗಿತ್ವ

### ಮಲೇರಿಯ ರೋಗವು ಹರಡದಂತೆ ಈ ಕೆಳಕಂಡ ಕ್ರಮಗಳನ್ನು ಅನುಸರಿಸಿ.

- ಯಾವುದೇ ಜ್ವರ ಮಲೇರಿಯ ಇರಬಹುದು, ಆದಷ್ಟು ಶೀಘ್ರವಾಗಿ ರಕ್ತ ಪರೀಕ್ಷೆ ಮಾಡಿಸಿ ಕ್ಲೋರೋಕ್ವಿನ್ ಗುಳಿಗೆಗಳನ್ನು ತೆಗೆದುಕೊಳ್ಳಿ.
- ಮಲೇರಿಯ ಎಂದು ರಕ್ತ ಪರೀಕ್ಷೆಯಲ್ಲಿ ಖಚಿತಪಟ್ಟಲ್ಲಿ ತಪ್ಪದೇ ತೀವ್ರ ಚಿಕಿತ್ಸೆ ಪಡೆಯಿರಿ. ಈ ಚಿಕಿತ್ಸೆಯ ವಿವರಗಳು ಹಾಗೂ ಗುಳಿಗೆಗಳು ಆರೋಗ್ಯ ಕಾರ್ಯಕರ್ತರಲ್ಲಿ ಹಾಗೂ ಎಲ್ಲಾ ಸರ್ಕಾರಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಉಚಿತವಾಗಿ ದೊರಕುತ್ತದೆ.
- ಶಿಶುಗಳು ಮತ್ತು ಗರ್ಭಿಣಿಯರಿಗೆ ಮಲೇರಿಯ ರೋಗವು ಆತಂಕಕಾರಿಯಾಗಿದ್ದು, ಅಂತಹವರು ಯಾವುದೇ ಜ್ವರವಿರಲಿ, ತಡಮಾಡದೇ ವೈದ್ಯರ ಸಲಹೆ ಪಡೆಯುವುದು.
- ನೀರು ಶೇಖರಣಾ ತೊಟ್ಟಿಗಳನ್ನು ಭದ್ರವಾದ ಮುಚ್ಚಳದಿಂದ ಯಾವಗಲೂ ಮುಚ್ಚಿರಬೇಕು. ವಾರಕ್ಕೊಮ್ಮೆ ನೀರನ್ನು ಸಂಪೂರ್ಣವಾಗಿ ಖಾಲಿ ಮಾಡಿ, ಒಣಗಿಸಿ ಮತ್ತೆ ಭರ್ತಿ ಮಾಡಿಕೊಂಡಲ್ಲಿ ಇಂತಹ ನೀರು ಶೇಖರಣೆಗಳಲ್ಲಿ ರೋಗವಾಹಕ ಸೊಳ್ಳೆಗಳ ಉತ್ಪತ್ತಿಯನ್ನು ತಡೆಗಟ್ಟಬಹುದು.
- ಆರೋಗ್ಯ ಇಲಾಖೆಯು ಕೈಗೊಳ್ಳುವ ಕೀಟನಾಶಕ ಸಿಂಪಡಣಾ ಕಾರ್ಯಕ್ಕೆ ಸಂಪೂರ್ಣ ಸಹಕಾರ ನೀಡಿ.
- ಸದಾ ನೀರಿರುವ ಕೆರೆ, ಕುಂಟೆ, ಬಾವಿ, ತೋಟದ ಕಾರಂಜಿಗಳು ಮುಂತಾದ ತಾಣಗಳಲ್ಲಿ ಸೊಳ್ಳೆಯ ಮರಿಗಳನ್ನು ತಿನ್ನುವ ಗ್ಯಾಂಬೂಸಿಯ ಮತ್ತು ಗಪ್ಪಿ ಎಂಬ ಸಣ್ಣ ಸಣ್ಣ ಮೀನುಗಳನ್ನು ಬಿಡುವುದು.
- ಮನೆಯ ಕಿಟಕಿ ಬಾಗಿಲುಗಳಿಗೆ ಕೀಟ ತಡೆಗಟ್ಟುವ ಜಾಲರಿಗಳನ್ನು ಅಳವಡಿಸಿಕೊಳ್ಳಿ.
- ಮಲಗುವಾಗ ತಪ್ಪದೇ ಸೊಳ್ಳೆ ಪರದೆಯನ್ನು ಉಪಯೋಗಿಸಿ.
- ಸಂಜೆವೇಳೆ ಬೇವಿನ ಹೊಗೆ ಹಾಕುವುದು, ಸಾಮ್ರಾಣಿ ಧೂಪ ಹಾಕುವುದು ಹಾಗೂ ರಾತ್ರಿವೇಳೆ ಇತರ ಸೊಳ್ಳೆ ನಿರೋಧಕ ವಿಧಾನಗಳನ್ನು ಬಳಸಿ ಸೊಳ್ಳೆ ಕಡಿತದಿಂದ ದೂರವಿರಿ.
- ಹರಿಯದೇ ನಿಂತ ನೀರು - ಸೊಳ್ಳೆ ಉತ್ಪತ್ತಿಯ ತವರು. ಮನೆಯ ಸುತ್ತಮುತ್ತ ನೀರು ನಿಲ್ಲದಂತೆ ಎಚ್ಚರ ವಹಿಸಿ ಸೊಳ್ಳೆಗಳ ಉತ್ಪತ್ತಿಯನ್ನು ತಡೆಗಟ್ಟಿರಿ.

**ಶೀಘ್ರ ಪತ್ತೆ - ತ್ವರಿತ ಚಿಕಿತ್ಸೆಯಿಂದ ಸಾವು ನೋವುಗಳನ್ನು ತಡೆಗಟ್ಟಲು ಖಂಡಿತ ಸಾಧ್ಯ**



ಕರ್ನಾಟಕ ವಾರ್ತೆ.
Karnataka Information

# ಬಿಸಿಲ ಹಕ್ಕಿಯ ಹಾಡು - ಪುಸ್ತಕ ಪರಿಚಯ




ಬಿಸಿಲ ಹಕ್ಕಿಯ ಹಾಡು : ಡಾ॥ ಅನಸೂಯ ಎಂ. ಕದಂ.
(ಪ್ರೇಮ ಸಿರ್ಸೆ ಅವರ ಕೃತಿಯ ಸ್ತ್ರೀವಾದಿ ಅಧ್ಯಯನ)
ಪ್ರಕಾಶನ : ವೈಷ್ಣವಿ, ಗುಲಬರ್ಗಾ.
ಪುಟ : 92, ಬೆಲೆ : 75/- (2004)
ಹೈದರಾಬಾದ್

ಹೈದರಾಬಾದ್ ಕರ್ನಾಟಕದ ಲೇಖಕಿಯರ ಕುರಿತ ಅಧ್ಯಯನವನ್ನು ವಿಶೇಷ ಆಸಕ್ತಿಯನ್ನಾಗಿ ಮಾಡಿಕೊಂಡಿರುವ ಡಾ॥ ಅನಸೂಯ ಎಂ. ಕದಂರವರ 'ಬಿಸಿಲ ಹಕ್ಕಿಯ ಹಾಡು' ಕವಿಯತ್ರಿ ಪ್ರೇಮ ಸಿರ್ಸೆಯವರ ಪ್ರಣಯ ಮುಕ್ತಗಳ ಅಧ್ಯಯನವಾಗಿದೆ. ಪ್ರೇಮಾ ಅವರ 'ನೂರೊಂದು ನೆನಪು ಎದೆಯಾಳ'ದಲ್ಲಿ ಕವನ ಸಂಕಲನದ ಮೂಲಕ ಅವರ ಸ್ತ್ರೀಲೋಕದ ಪರಿಕಲ್ಪನೆಯ ಸ್ವರೂಪವನ್ನು ಈ ಕೃತಿಯಲ್ಲಿ ಅನಾವರಣ ಮಾಡಲಾಗಿದೆ.

ಮೊದಲಿಗೆ ಪ್ರಣಯ ಮುಕ್ತಗಳ ರಚನೆಯ ಶಿಲ್ಪ ಮತ್ತು ಸ್ವರೂಪವನ್ನು ಕುರಿತು ಬರೆಯುತ್ತಾ , ಇಲ್ಲಿಯ ಸ್ತ್ರೀ ಪರ ಸಂವೇದನೆ ಮತ್ತು ಚುಟುಕು ಹನಿಗವನ' ಮಾದರಿಯ ಸ್ವರೂಪವನ್ನು ಜನಪದಗೀತೆಗಳಲ್ಲಿಯೂ ಕಾಣಬಹುದು. ಅವುಗಳ ವಸ್ತು, ವಿಷಯ ಮತ್ತು ರಾಚನಿಕ ಸ್ವರೂಪವು ಜನಪದ ಸಾಹಿತ್ಯದ ಚಿಕ್ಕ ಮತ್ತು ಚೊಕ್ಕ ಛಂದೋವಿಧಾನವಾದ ತ್ರಿಪದಿಯ ರೀತಿಯಲ್ಲಿದೆ ಎಂಬುದನ್ನು ಗುರುತಿಸುತ್ತಾರೆ.

ಪ್ರೇಮಾ ಸಿರ್ಸೆಯವರ ಪ್ರಣಯ ಮುಕ್ತಗಳನ್ನು ನಾಲ್ಕು ಭಾಗಗಳಾಗಿ (1) ಆಹ್ವಾನ (2) ಅವಲಂಬನ (3) ವೈರುಧ್ಯ ಮತ್ತು (4) ವಿಷಾದಗಳೆಂದು ವಿಂಗಡಿಸುತ್ತಾರೆ. ಈ ಮೂಲಕ ಸಮಾಜದಲ್ಲಿ ನೆಲೆಸಿರುವ ಲಿಂಗ ಅಸಮಾನತೆಯ ಕ್ರೂರ ಸ್ವರೂಪವನ್ನು ಹೊರಹೊಮ್ಮಿಸುವ ಪ್ರಯತ್ನ ಮಾಡಲಾಗಿದೆ. ವೈಯಕ್ತಿಕ ನೆಲೆಯ ಸ್ವತಂತ್ರ ಮನೋಭಾವದ ಅಪೇಕ್ಷೆಯು ಸಾರ್ವಜನಿಕವಾದಾಗ ದುರಂತವಾಗುವ ಕ್ರಮವನ್ನು ಚಿತ್ರಿಸಿದೆ. ಇಂಥ ಕ್ರಮದಲ್ಲಿ ಅದು ಎದುರಿಸುವ ಪುರುಷಪರ ವಿಚಾರ ಧಾರೆಯ ಸ್ವರೂಪವೇನು ? ಅದು ಪ್ರಕಟಪಡಿಸುವ ಸ್ತ್ರೀಪರ ಧೋರಣೆಯ ರೂಪು ರೇಷೆಯೇನು ಎಂಬುದನ್ನು ಎಚ್ಚರದಿಂದ ಪರಿಶೀಲನೆ ಮಾಡಿದ್ದಾರೆ.

ಪುರುಷ ಸಂಬಂಧವು ಒಳಗೊಂಡಿರುವ ಪ್ರಾಕೃತಿಕ ಸೆಳೆತದ ತೀವ್ರತೆ ಮತ್ತು ಆ ಕುರಿತು ಸ್ತ್ರೀ ಸಂವೇದನೆ ತಳೆದ ನಿಷ್ಠೆಯನ್ನು ಬಿಂಬಿಸುವ ಪ್ರೇಮಾ ಅವರ ಕವನದ ಆಶಯವನ್ನು ಗುರುತಿಸುತ್ತಲೇ ಸ್ತ್ರೀ ಪುರುಷ ಸಂಬಂಧವು ಅಪೇಕ್ಷಿತ ಬಂಧನವಾಗಿ, ಮಾನಸಿಕ ಸಂಬಂಧವು ದೈಹಿಕ ಸಂಬಂಧವಾಗಿ ಬದಲಾಗಿ ಪ್ರಣಯದ ಹೊಸ ಅನುಭವದಲ್ಲಿ ಅಂತರ್ ವೈರುಧ್ಯಗಳನ್ನು ತೆರೆದು ತೋರಿಸುವುದನ್ನು ಅನಸೂಯ ಗುರುತಿಸುತ್ತಾರೆ. ಈ ವೈರುಧ್ಯತೆಗಳ ಪರಿಣಾಮವಾಗಿ ವಿಷಾದವು ಹುಟ್ಟಿಕೊಳ್ಳುವುದನ್ನು, ಇಲ್ಲಿ ಗುರುತಿಸಲಾಗುತ್ತದೆ.

ಈ ಕೃತಿಯಲ್ಲಿ ಕಾವ್ಯ ವಿಮರ್ಶೆಯ ಜೊತೆಗೆ ಕವಿಯತ್ರಿ ಪ್ರೇಮಾ ಸಿರ್ಸೆಯವರ ಸಂದರ್ಶನ ಲೇಖನವೂ ಸೇರಿದೆ. ಬದುಕಿನಲ್ಲಿ ಹೋರಾಟ ಮಾಡುತ್ತಲೇ ಬರವಣಿಗೆಯಲ್ಲಿ ತೊಡಗಿಕೊಂಡು ಕನ್ನಡದಲ್ಲಿ ಅಪರೂಪದ ಪ್ರಣಯ ಮುಕ್ತಕಗಳನ್ನು ಬರೆದ ಕವಿಯತ್ರಿಯ ವಿಶಿಷ್ಟತೆಯನ್ನು ಈ ಸಂದರ್ಶನ ಪ್ರಕಟಿಸುತ್ತದೆ.

ಬೆನ್ನುಡಿಯಲ್ಲಿ ಡಾ॥ ಮೊಗಳ್ಳಿಯವರು ಹೇಳಿರುವಂತೆ "ಹೆಣ್ಣು ಗಂಡುಗಳ ನಡುವೆ ನಿರಂತರವಾಗಿ ಕ್ರಿಯಾಶೀಲವಾಗುವ ಪ್ರೇಮ ಕಾಮಗಳ ಭಾವನಾತ್ಮಕ ಸ್ಥಿತಿಯು ಹೇಗೆ ನಮ್ಮ ಸಾಮಾಜಿಕ, ಸಾಂಸಾರಿಕ, ಆಧ್ಯಾತ್ಮಿಕ ವಲಯಗಳನ್ನು ನಿರ್ಮಿಸಿವೆ ಎಂಬುದರ ಹುಡುಕಾಟವು ಕೃತಿಯ ಉದ್ದಕ್ಕೂ ಸಾಗುತ್ತದೆ" ಎಂಬ ಮಾತು ಒಟ್ಟು ಪುಸ್ತಕದ ಅಂತರಾಳವನ್ನು ಪರಿಚಯಿಸುತ್ತದೆ. ಹೀಗೆ ನಿರ್ದಿಷ್ಟವಾದ ಕೃತಿ ಮತ್ತು ಲೇಖಕಿಯರ ಸಾಹಿತ್ಯದ ಅಧ್ಯಯನವು ಸ್ತ್ರೀವಾದಿ ವಿಮರ್ಶೆಯ ಲೋಕದ ಆಳವನ್ನು ವಿಸ್ತರಿಸುತ್ತದೆ ಎಂಬ ದೃಷ್ಟಿಯಿಂದ ಗಮನಿಸಿದಾಗ ಈ ಕೃತಿಯ ಕೊಡುಗೆಯ ಇತ್ಯಾತ್ಮಕತೆ ಕಂಡು ಬರುತ್ತದೆ. ▢▢

*- ಅಚಲ*

# ಬಾಲ್ಯವಿವಾಹ - ಕಾನೂನಿನ ಸಂದಿಗ್ಧತೆ

*- ಹೇಮಲತಾ ಮಹಿಷಿ, ವಕೀಲರು, ಬೆಂಗಳೂರು.*

15 ವರ್ಷ ವಯಸ್ಸಿನ ಅಪ್ರಾಪ್ತ ಬಾಲಕಿಯ ವಿವಾಹವನ್ನು ಸಮರ್ಥಿಸಿ ಇತ್ತೀಚೆಗೆ ದೆಹಲಿ ಉಚ್ಚನ್ಯಾಯಾಲಯ ನೀಡಿರುವ ತೀರ್ಪು ಎಲ್ಲರಿಗೂ ದೊಡ್ಡ ಆಘಾತವನ್ನುಂಟು ಮಾಡಿದೆ. ತಂದೆ-ತಾಯಿಗಳು ವಿರೋಧಿಸಿದರೂ ಪ್ರೀತಿಸಿ ಮದುವೆಯಾದವನ ಜೊತೆಗೇ ಇರುತ್ತೇನೆಂದು ಆ ಅಪ್ರಾಪ್ತ ವಯಸ್ಸಿನ ಬಾಲಕಿ ಹೇಳಿದುದನ್ನು ಆಧರಿಸಿ ಪ್ರೇಮಿಗಳಿಬ್ಬರ ಪ್ರೇಮ ವಿವಾಹವನ್ನು ನ್ಯಾಯಾಲಯ ಎತ್ತಿಹಿಡಿದು ನಾನಾ ರೀತಿಯ ಪ್ರಶ್ನೆಗಳನ್ನು ಹುಟ್ಟು ಹಾಕಿದೆ. ತಂದೆ-ತಾಯಿಗಳ/ ಪಾಲಕರ ಒಪ್ಪಿಗೆ ಇಲ್ಲದೇ ಅಪ್ರಾಪ್ತ ವಯಸ್ಸಿನ ಹುಡುಗಿ ವಿವಾಹವಾಗಬಹುದೇ ? ಇಂತಹ ಹುಡುಗಿಯನ್ನು ಹುಡುಗ ವಿವಾಹವಾಗುವುದು ಅಪರಾಧವೇ ? ಇಂತಹ ವಿವಾಹ ಊರ್ಜಿತವೇ ? ಇದಕ್ಕೆ ಉತ್ತರವನ್ನು ನಮ್ಮ ಹಲವಾರು ಹರಿದು ಹಂಚಿಹೋಗಿರುವ ಕಾನೂನುಗಳಲ್ಲಿ ಹುಡುಕಬೇಕಾಗುತ್ತದೆ. ಕಾನೂನು ಸೃಷ್ಟಿಸಿರುವ ಗೊಂದಲದಲ್ಲಿ ಬಹುಶಃ ನ್ಯಾಯಾಲಯಕ್ಕೆ ಹಾಗೆ ತೀರ್ಪು ನೀಡದೇ ಬೇರೆ ದಾರಿ ಇರಲಿಲ್ಲ. ಕಾನೂನುಗಳು ಹೇಳಿರುವುದನ್ನು ನ್ಯಾಯಾಲಯಗಳು ಜಾರಿಗೊಳಿಸಬೇಕಾಗುತ್ತದೆ ಎಂಬುದನ್ನು ಅರ್ಥಮಾಡಿಕೊಂಡಾಗ ತಪ್ಪು ಎಲ್ಲಿದೆ ಎಂಬುದು ಸ್ಪಷ್ಟವಾಗುತ್ತದೆ.

1929ರ ಬಾಲ್ಯವಿವಾಹ ತಡೆಗಟ್ಟುವ ಕಾನೂನು, 18 ವರ್ಷ ತುಂಬದ ಹುಡುಗಿ 21 ವರ್ಷ ತುಂಬದ ಹುಡುಗನನ್ನು ಬಾಲಕ / ಬಾಲಕಿ ಎಂದು ಹೇಳುತ್ತದೆ ಮತ್ತು ಹುಡುಗ ಅಥವಾ ಹುಡುಗಿ ಯಾರಾದರಲ್ಲಿ ಒಬ್ಬರು ವಿವಾಹದ ಸಮಯದಲ್ಲಿ ಈ ರೀತಿ ಬಾಲಕ ಅಥವಾ ಬಾಲಕಿಯಾಗಿದ್ದರೆ ಅದನ್ನು ಬಾಲ್ಯವಿವಾಹವೆಂದು ಅರ್ಥ ವಿವರಣೆ ನೀಡುತ್ತದೆ. 18 ವರ್ಷ ತುಂಬದ ಹುಡುಗ/ ಹುಡುಗಿಯನ್ನು ಅಪ್ರಾಪ್ತ ವಯಸ್ಕರೆಂದು ಹೇಳುತ್ತದೆ.

ಈ ಕಾನೂನಿನಲ್ಲಿ ಹಲವಾರು ರೀತಿಯಲ್ಲಿ ಹೇಳಿದಂತೆ ಬಾಲ್ಯವಿವಾಹಗಳನ್ನು ಅಪರಾಧಗಳೆಂದು ಘೋಷಿಸಿ ಅವುಗಳಿಗೆ ಶಿಕ್ಷೆ ವಿಧಿಸಲಾಗಿದೆ.

(1) 18 ವರ್ಷ ತುಂಬಿದ ಆದರೆ 21 ವರ್ಷ ತುಂಬದ ಹುಡುಗ ಬಾಲ್ಯ ವಿವಾಹವಾದರೆ ಆ ಅಪರಾಧಕ್ಕೆ ಅವನಿಗೆ 15 ದಿನಗಳವರೆಗಿನ ಸಾದಾ ಸಜೆ ಅಥವಾ 1000ರೂ. ವರೆಗಿನ ದಂಡ ಅಥವಾ ಎರಡೂ,

(2) 21 ವರ್ಷ ತುಂಬಿದ ಹುಡುಗ ಬಾಲ್ಯ ವಿವಾಹವಾದಲ್ಲಿ ಅವನಿಗೆ 3 ತಿಂಗಳವರೆಗಿನ ಸಾದಾ ಸಜಾ ಮತ್ತು ದಂಡ.

(3) ಯಾವುದೇ ವ್ಯಕ್ತಿ ಬಾಲ್ಯವಿವಾಹ ಮಾಡಿದರೆ ಅಥವಾ ಸಹಾಯ ಮಾಡಿದರೆ ಅವರಿಗೆ 3 ತಿಂಗಳವರೆಗಿನ ಸಾದಾ ಸಜಾ ಮತ್ತು ದಂಡ. (ಇಲ್ಲಿ ತನಗೆ ಅದು ಬಾಲ್ಯ ವಿವಾಹ ಎಂಬುದು ತಿಳಿದಿರಲಿಲ್ಲ ಎಂಬುದನ್ನು ಸಾಬೀತು ಪಡಿಸಿದರೆ ಅವನು ಅಪರಾಧಿ ಯಾಗುವುದಿಲ್ಲ).

(4) ಅಪ್ರಾಪ್ತವಯಸ್ಕರು (18 ವರ್ಷದ ಒಳಗಿನ ಹುಡುಗ/ ಹುಡುಗಿ) ಬಾಲ್ಯ ವಿವಾಹವಾದಾಗ, ಆ ಅಪ್ರಾಪ್ತವಯಸ್ಕರ ಪೋಷಕರು, ಈ ವಿವಾಹಕ್ಕೆ ಯಾವುದೇ ರೀತಿಯಲ್ಲಿ ಸಹಾಯ ಮಾಡಿದಲ್ಲಿ, ಒಪ್ಪಿಗೆ ಕೊಟ್ಟಿದ್ದಲ್ಲಿ, ನಿರ್ಲಕ್ಷ್ಯದಿಂದ ತಡೆ ಹಿಡಿಯದಿದ್ದಲ್ಲಿ ಅಂತಹ ಪೋಷಕರಿಗೆ 3 ತಿಂಗಳವರೆಗಿನ ಸಾದಾ ಸಜಾ ಮತ್ತು ದಂಡ. (ಆದರೆ ಪೋಷಕಳು ಮಹಿಳೆಯಾಗಿದ್ದಲ್ಲಿ ಸಜಾ ಶಿಕ್ಷೆ ವಿಧಿಸಲಾಗದು). ಬಾಲ್ಯ ವಿವಾಹ ನಡೆದಿದ್ದಲ್ಲಿ ಅಂತಹ ಪೋಷಕರು ಅದನ್ನು ತಡೆಹಿಡಿಯುವಲ್ಲಿ ನಿರ್ಲಕ್ಷ್ಯ ತೋರಿದ್ದಾರೆ ಎಂಬ ಪೂರ್ವಭಾವನೆಯನ್ನೂ ಇಲ್ಲಿ ಮಾಡಲಾಗುತ್ತದೆ. ಅದನ್ನು ತಡೆಗಟ್ಟಲು ತಾವು ಎಲ್ಲಾ ರೀತಿಯ ಕ್ರಮ ತೆಗೆದು ಕೊಂಡಿರುವುದನ್ನು ಪೋಷಕರು ರುಜುವಾತು ಪಡಿಸಬೇಕಾಗುತ್ತದೆ, ಹಾಗಿದ್ದಲ್ಲಿ ಮಾತ್ರ ಶಿಕ್ಷೆ ಇಲ್ಲ.

ನ್ಯಾಯಾಲಯಕ್ಕೆ ಯಾವುದೇ ರೀತಿಯಲ್ಲಿ ಇಂತಹ ಬಾಲ್ಯವಿವಾಹ ನಡೆಯಬಹುದೆನ್ನುವ ಮಾಹಿತಿ ದೊರೆತರೂ, ಮೇಲೆ ಹೇಳಿದ ಹುಡುಗ, ಸಹಾಯಕರು, ಪೋಷಕರು ಅವರ ವಿರುದ್ಧ ಆ ವಿವಾಹವನ್ನು ನಿಷೇಧಿಸಿ ನಿರ್ಬಂಧಕಾಜ್ಞೆಯನ್ನು ಮಾಡಬಹುದು. ಆ ಆಜ್ಞೆಯನ್ನು ಯಾರಾದರೂ ಉಲ್ಲಂಘಿಸಿದರೆ 3 ತಿಂಗಳವರೆಗಿನ ಸಜಾ ಅಥವಾ 1000 ರೂ. ವರೆಗಿನ ದಂಡ ಅಥವಾ ಎರಡನ್ನು ವಿಧಿಸಬಹುದು. (ಮಹಿಳೆಗೆ ಸಜೆಯ ಶಿಕ್ಷೆ ವಿಧಿಸಲಾಗದು).

ಈ ಕಾನೂನನ್ನು ನೋಡಿದಾಗ ಸ್ಪಷ್ಟವಾಗುವ ವಿಷಯಗಳು ಎರಡು :-

(1) ಬಾಲ್ಯ ವಿವಾಹ ಶಿಕ್ಷಾರ್ಹವೇ ಹೊರತು ಅನೂರ್ಜಿತವಲ್ಲ.

(2) ಬಾಲ್ಯ ವಿವಾಹವಾಗುವ ಹುಡುಗಿಗೆ ಶಿಕ್ಷೆ ಇಲ್ಲ (ಇಲ್ಲಿ ಅವಳು ಬಾಲ್ಯ ವಿವಾಹಕ್ಕೆ ಬಲಿಯಾದ ಬಲಿಪಶು ಎಂದು ತಿಳಿಯಲಾಗುತ್ತದೆ).

1955ರ ಹಿಂದೂ ವಿವಾಹ ಅಧಿನಿಯಮದಲ್ಲಿ ವಿವಾಹದ ಸಮಯದಲ್ಲಿ 21 ವರ್ಷ ತುಂಬಿದ ಯಾವುದೇ ಹಿಂದೂ ಹುಡುಗ ಮತ್ತು 18 ವರ್ಷ ತುಂಬಿದ ಯಾವುದೇ ಹಿಂದೂ ಹುಡುಗಿ ಹಿಂದೂ ವಿವಾಹವಾಗಬಹುದೆಂದು ತಿಳಿಸಲಾಗಿದೆ. ಆದರೆ, ಈ ಕಾನೂನಿನಲ್ಲಿಯೂ ಅಪ್ರಾಪ್ತವಯಸ್ಕರ ನಡುವೆ ನಡೆಯುವ ಹಿಂದೂ ವಿವಾಹ ಕಾನೂನು ಬಾಹಿರ, ಅನೂರ್ಜಿತ ಎಂದು ಘೋಷಿಸಲಾಗಿಲ್ಲ. ಆದರೆ, ಹುಡುಗಿ, ತನಗೆ 15 ವರ್ಷ ತುಂಬುವ ಮೊದಲೇ ತನಗೆ ವಿವಾಹವಾಗಿದೆ ಹಾಗೂ ತಾನು ತನಗೆ 15 ವರ್ಷ ತುಂಬಿದ ನಂತರ ಆದರೆ 18 ವರ್ಷ ತುಂಬುವ ಮೊದಲು ಆ ವಿವಾಹವನ್ನು ಧಿಕ್ಕರಿಸಿದ್ದೇನೆ ಎಂದು ಹೇಳಿ ವಿಚ್ಛೇದನಕ್ಕೆ ಅರ್ಜಿ ಹಾಕಬಹುದು. ಆದರೆ, ಇಲ್ಲಿಯೂ ಗಮನಿಸಬೇಕಾದ ಅಂಶವೆಂದರೆ :-

(1) 15 ವರ್ಷ ತುಂಬುವ ಮೊದಲು ವಿವಾಹವಾಗಿರುವುದು ಕೂಡಾ ಹಿಂದೂ ವಿವಾಹ ಕಾನೂನಿನಲ್ಲಿ ಅನೂರ್ಜಿತವಲ್ಲ.

(2) ಅವಳು 15 ತುಂಬಿದ ನಂತರ 18 ತುಂಬವ ಒಳಗೆ ಆ ವಿವಾಹವನ್ನು ಧಿಕ್ಕರಿಸಿದಿದ್ದರೆ ಅದು ಊರ್ಜಿತ ವಿವಾಹ.

(3) ಆ ರೀತಿ ಧಿಕ್ಕರಿಸಿದರೂ ನ್ಯಾಯಾಲಯಕ್ಕೆ ಅರ್ಜಿ ಹಾಕಿ ವಿಚ್ಛೇದನ ಪಡೆದರೆ ಮಾತ್ರ ಆ ವಿವಾಹದಿಂದ ಮುಕ್ತಿ ಇಲ್ಲವಾದರೆ ಅದು ಬಂಧನಕಾರಿ.

(ಹುಡುಗನಿಗೆ ಈ ಕಾರಣದ ಮೇಲೆ ವಿಚ್ಛೇದನಕ್ಕೆ ಅರ್ಜಿಹಾಕಲು ಅವಕಾಶವಿಲ್ಲ).

ಕ್ರಿಶ್ಚಿಯನ್ ವಿವಾಹ ಕಾನೂನಿನಡಿ ವಿವಾಹವಾಗಲು ಇಬ್ಬರಿಗೂ 21 ವರ್ಷಗಳು ತುಂಬಿರಬೇಕು. ಆದರೆ, ಅಪ್ರಾಪ್ತ ವಯಸ್ಕರ ವಿವಾಹಕ್ಕೆ ಪೋಷಕರ ಒಪ್ಪಿಗೆ ಅಗತ್ಯ. ಭಾರತೀಯ ಕ್ರಿಶ್ಚಿಯನ್ನರ (ಮತಾಂತರಗೊಂಡ ಭಾರತೀಯರು) ವಿವಾಹಕ್ಕೆ ಹುಡುಗಿಗೆ 18 ವರ್ಷ, ಹುಡುಗನಿಗೆ 21 ವರ್ಷ ತುಂಬಿರಬೇಕು. ಆದರೆ, ಕ್ರಿಶ್ಚಿಯನ್ ವಿವಾಹ ವಿಚ್ಛೇದನೆಯ ಕಾನೂನಿನಡಿ ಅಪ್ರಾಪ್ತ ವಯಸ್ಕರ ವಿವಾಹ ಅನೂರ್ಜಿತವಲ್ಲ ಅದು ವಿಚ್ಛೇದನಕ್ಕೂ ಕಾರಣವಾಗುವುದಿಲ್ಲ.

ಮುಸ್ಲಿಂ ಕಾನೂನಿನಡಿ ಪ್ರೌಢಾವಸ್ಥೆಗೆ ಬಂದ ಹುಡುಗ-ಹುಡುಗಿಯರು ಕಾನೂನುಬದ್ಧವಾಗಿ ವಿವಾಹವಾಗಲು ಅರ್ಹರು (ಪ್ರೌಢಾವಸ್ಥೆ ಎಂದರೆ ಸಂತಾನೋತ್ಪತ್ತಿ ಶಕ್ತಿ ಪಡೆದವರು). ಒಂದು ಪ್ರಕರಣದಲ್ಲಿ ಜ್ಯುಡಿಷಿಯಲ್ ಕಮಿಟಿ ಮಹಮ್ಮದೀಯ ಕಾನೂನಿನ ಪ್ರಕಾರ ಹುಡುಗಿ ಪ್ರೌಢಾವಸ್ಥೆ ತಲುಪುವುದು ಅವಳ 9 ವರ್ಷಕ್ಕೆ ಎಂದು ಹೇಳಿದೆ. ಹಿದಾಯದಲ್ಲಿ ಹುಡುಗ ಪ್ರೌಢಾವಸ್ಥೆ ತಲುಪುವ ಕನಿಷ್ಠ ವಯಸ್ಸು 12 ವರ್ಷ, ಹುಡುಗಿಯದು 9 ವರ್ಷ ಎಂದು ತಿಳಿಸಿದೆ. ಇಂತಹ ಹುಡುಗಿಯ ಒಪ್ಪಿಗೆಯಿಂದ ವಿವಾಹವಾಗುವುದು ಕಾನೂನುಬದ್ಧ. ಹಿಂದೂ ವಿವಾಹದಂತೆ 15 ವರ್ಷ ತುಂಬುವ ಮೊದಲು ಪೋಷಕರು ಮದುವೆ ಮಾಡಿದ್ದರೆ ಹುಡುಗಿ 15 ವರ್ಷ ತುಂಬಿದ ನಂತರ 18 ವರ್ಷ ತುಂಬುವ ಮೊದಲು ಆ ಮದುವೆ ಧಿಕ್ಕರಿಸಿ ವಿಚ್ಛೇದನ ಪಡೆಯಬಹುದು. (ಆದರೆ, ಲೈಂಗಿಕ ಸಂಬಂಧ ನಡೆದಿರಬಾರದು).

ಭಾರತೀಯ ದಂಡ ಸಂಹಿತೆಯ 361ನೇ ವಿಧಿಯ ಪ್ರಕಾರ ಯಾವುದೇ ಕಾನೂನುಬದ್ಧ ಪೋಷಕರ ವಶದಿಂದ 16 ವರ್ಷದ ಕೆಳಗಿನ ಅಪ್ರಾಪ್ತ ವಯಸ್ಕ ಹುಡುಗನನ್ನು, 18 ವರ್ಷದ ಕೆಳಗಿನ ಹುಡುಗಿಯನ್ನು ಪೋಷಕರ ಒಪ್ಪಿಗೆ ಇಲ್ಲದೇ ''ತೆಗೆದುಕೊಂಡು ಹೋಗುವುದು'' ಅಪಹರಣದ ಅಪರಾಧವಾಗುತ್ತದೆ, ಅದಕ್ಕೆ ದುರುದ್ದೇಶಕ್ಕೆ ಅನುಗುಣವಾಗಿ ಕಠಿಣ ಸಜಾ ಇದೆ.

ಆದರೆ, ಇಂತಹ ಅಪ್ರಾಪ್ತ ವಯಸ್ಸಿನ ಹುಡುಗಿ ಯಾವುದೇ ಒತ್ತಾಯ, ಆಮಿಷ, ಬೆದರಿಕೆ ಇಲ್ಲದೇ ಸ್ವ-ಇಚ್ಛೆಯಿಂದ ಬೇರೆಯವರೊಂದಿಗೆ ಹೋಗಿದ್ದರೆ ಅದು 'ಅಪಹರಣ'ವಾಗುವುದಿಲ್ಲ.

ಹಾಗೆಯೇ, 376 ಮತ್ತು 376ನೇ ವಿಧಿಗಳಡಿ ಅತ್ಯಾಚಾರ ಅಪರಾಧದ ಬಗ್ಗೆ, ಅದರ ಶಿಕ್ಷೆಯ ಬಗ್ಗೆ ತಿಳಿಸಲಾಗಿದೆ. ಅದರಂತೆ -

(1) 16 ವರ್ಷದ ಒಳಗಿನ ಯಾವುದೇ ಹುಡುಗಿಯೊಂದಿಗೆ ಲೈಂಗಿಕ ಸಂಪರ್ಕ ಹೊಂದುವುದು ಅತ್ಯಾಚಾರದ

CPMG/KA/BG-8/2003-05

RNI No. 45577/88

*Posted at Basavanagudi P.O. On the 25th of every Month*

*November - 2005*

ಅಪರಾಧ. ಇಲ್ಲಿ ಹುಡುಗಿಯ ಒಪ್ಪಿಗೆ ಇರುವುದು, ಇಲ್ಲದಿರುವುದು ಅಮುಖ್ಯ. ಆದರೆ, 15 ವರ್ಷ ದಾಟಿದ ತನ್ನ ಹೆಂಡತಿಯೊಂದಿಗೆ ಲೈಂಗಿಕ ಸಂಪರ್ಕ ಮಾಡುವುದು ಅಪರಾಧವಲ್ಲ.

ಇಂತಹ ಅತ್ಯಾಚಾರಕ್ಕೆ ಕನಿಷ್ಠ 7 ವರ್ಷಗಳ ಗರಿಷ್ಠ 10 ವರ್ಷ ಅಥವಾ ಜೀವಾವಧಿಯ ಸಜಾ ಮತ್ತು ದಂಡ ಇದೆ. ಆದರೆ, 12 ವರ್ಷ ತುಂಬಿರುವ ತನ್ನ ಅಪ್ರಾಪ್ತ ವಯಸ್ಕ ಹೆಂಡತಿಯೊಂದಿಗೆ ಲೈಂಗಿಕ ಸಂಬಂಧ ಹೊಂದಿದರೆ ಆಗ ಗಂಡನಿಗೆ ಸಜಾದಲ್ಲಿಯೂ ವಿನಾಯಿತಿ ಇದೆ. ಅವನಿಗೆ ಎರಡು ವರ್ಷಗಳವರೆಗಿನ ಸಜಾ ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದಾಗಿದೆ. ಸಜಾ ಇಲ್ಲ ಕಡ್ಡಾಯ ಅಲ್ಲ ಎನ್ನುವುದನ್ನು ಗಮನಿಸಬೇಕು. ಹುಡುಗಿ 12 ವರ್ಷ ತುಂಬಿದವಳಾಗಿದ್ದು ತಾನು ಸ್ವ-ಇಚ್ಛೆಯಿಂದ ಮದುವೆಯಾಗಿ ಲೈಂಗಿಕ ಸಂಪರ್ಕ ಹೊಂದಿದ್ದಾಗಿ ಹೇಳಿದರೆ, ಕೇವಲ ದಂಡ ವಿಧಿಸಿ ಗಂಡನನ್ನು ಬಿಟ್ಟು ಬಿಡಲು ಅವಕಾಶವಿದೆ. ಇಂತಹ ಪ್ರಕರಣಗಳಲ್ಲಿ ಸಾಮಾನ್ಯವಾಗಿ ನ್ಯಾಯಾಲಯ ವಿವಾಹವನ್ನು ರಕ್ಷಿಸಲು ಪ್ರಯತ್ನಿಸುತ್ತದೆ. ಯುವ ಪ್ರೇಮಿಗಳನ್ನು ಒಂದಾಗಿಸಲು ಪ್ರಯತ್ನಿಸುತ್ತದೆ. ಆದರೆ, 12 ವರ್ಷದ ಕೆಳಗಿನ ವಯಸ್ಸಿನ ಹೆಂಡತಿಯಾಗಿದ್ದರೆ ಮಾತ್ರ ಶಿಕ್ಷೆ ಕಡ್ಡಾಯ. ಆದರೆ, ವಿವಾಹ ಅನೂರ್ಜಿತವಲ್ಲ.

ಈ ಕಾನೂನಿನ ಹಿನ್ನೆಲೆಯಲ್ಲಿ ದೆಹಲಿ ನ್ಯಾಯಾಲಯದ ತೀರ್ಪನ್ನು ಓದಬೇಕು. ಕಾನೂನು ತಿದ್ದುಪಡಿಯಾಗದ ಹೊರತು ಬಾಲ್ಯವಿವಾಹ ನಿಲ್ಲುವುದಿಲ್ಲ. ಕಾನೂನು ಮಾಡುವವರಿಗೇ ಧೈರ್ಯವಿಲ್ಲದಾಗ ನ್ಯಾಯಾಲಯಗಳು ನಿಸ್ಸಹಾಯಕವಾಗುತ್ತವೆ. ವಿವಾಹ ವೈಯಕ್ತಿಕ ಅಥವಾ ಮತೀಯ ಕಾನೂನಿನ ವಿಷಯವಾದ್ದರಿಂದ ಸರ್ಕಾರ ಮತ್ತು ಕಾನೂನು ನಿರ್ಮಾಪಕರು ಹೀಗೆ ಕೈಕಟ್ಟಿ ಕುಳಿತಿದ್ದಾರೆ. ಸೀಡಾ (CEDA) ಅಂತರಾಷ್ಟ್ರೀಯ ಒಪ್ಪಂದದಲ್ಲಿ ಈ ಬಗ್ಗೆ ತಮ್ಮ ಆಕ್ಷೇಪಣೆ ಇಟ್ಟಿದ್ದಾರೆ. □□

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri